ಪ್ರೌಢ ಶಾಲಾ

# ವ್ಯಾಕರಣ ಮತ್ತು ಪ್ರಬಂಧಸಾರ



ಪಂಡಿತ ತಿರು. ಶ್ರೀನಿವಾಸಾಚಾರ್ಯರ್



ಮೋಹನ್ ಸ್ಟೋರ್ಸ್,
ಮಧುಗಿರಿ

೧೯೪೮] [ಬೆಲೆ: ೧—೪—೦

ಪ್ರೌಢ ಶಾಲಾ

# ವ್ಯಾಕರಣಸಾರ

ಪಂಡಿತ ತಿರು. ಶ್ರೀನಿವಾಸಾಚಾರ್ಯರು

ಮೋಹನ್ ಸ್ಟೋರ್ಸ್,
ಮಧುಗಿರಿ

೧೯೪೮

ವಿಕ್ರಯಾಧಿಕಾರಿಗಳು :
**ಮೋಹನ್ ಸ್ಟೋರ್ಸ್,**
ಪ್ರೊಪ್ರೈಟರ್ಸ್ :
**ಡಿ. ವಿ. ಗಂಗಾಧರಶೆಟ್ಟಿ ಅಂಡ್ ಬ್ರದರ್,**
ಮಧುಗಿರಿ, ತುಮಕೂರು ಜಿಲ್ಲೆ



ಸ್ಟಾಕಿಸ್ಟರು :
**ವೈ. ಎನ್. ಜಗನ್ನಾಥಶೆಟ್ಟಿ ಅಂಡ್ ಬ್ರದರ್,**
ನಗರ್ತರಪೇಟೆ, ಬೆಂಗಳೂರು







ಮುದ್ರಣಕಾರರು :
**ಜಿ. ಪ್ರಹಲ್ಲಾದರಾವ್ ಮತ್ತು ಸಹೋದರರು,**
ಮಾಲೀಕರು,
**ಜನರಲ್ ಏಜೆನ್ಸಿ ಮುದ್ರಣಾಲಯ,**
ಮಾರ್ಕೆಟ್ ಚೌಕ, ತುಮಕೂರು

# ಪೀಠಿಕೆ



ಕಳೆದ ವರ್ಷ ನಾನು ರಚಿಸಿ ಪ್ರಕಟಗೊಳಿಸಿದ ವ್ಯಾಕರಣಸಾರವನ್ನು ಹೆಚ್ಚು ಉಪಯುಕ್ತಮಾಡಲು ಈ ಸಾಹಸ ನಡೆದಿದೆ. ಪ್ರೌಢಶಾಲೆಯ ಮೂರು ತರಗತಿಗಳಿಗೂ ವಿದ್ಯಾಭ್ಯಾಸದ ಇಲಾಖೆಯಿಂದ ಸೂಚಿತವಾಗಿರುವ ವ್ಯಾಕರಣ ಮತ್ತು ಪ್ರಬಂಧ ಭಾಗಗಳಿಗೆ ತಕ್ಕಂತೆ, ಈ ಪುಸ್ತಕದಲ್ಲಿ ವಿಷಯಗಳನ್ನು ವಿಶದವಾಗಿಯೂ, ಸುಲಭರೀತಿಯಲ್ಲಿಯೂ ನಿರೂಪಿಸಲಾಗಿದೆ. ಈಗ ಪ್ರೌಢಶಾಲೆಗಳಲ್ಲಿ ವ್ಯಾಕರಣ ಮತ್ತು ಪ್ರಬಂಧ ಪಾಠಗಳಿಗೆ ಸಹಾಯಕವಾದ ಗ್ರಂಥವು ಕನ್ನಡದಲ್ಲಿ ಅತಿ ವಿರಳವಾಗಿರುವುದರಿಂದ, ವಿದ್ಯಾರ್ಥಿಗಳು ಈ ಭಾಗಗಳಿಗೆ ಹೆಚ್ಚು ಗಮನವೀಯುವಂತಾಗಲೆಂದು "ಪ್ರೌಢಶಾಲಾ ವ್ಯಾಕರಣ ಮತ್ತು ಪ್ರಬಂಧಸಾರ" ಎಂಬ ಈ ಪುಸ್ತಕವನ್ನು ಎರಡು ಭಾಗಗಳಾಗಿ ಮಾಡಿ ಅಭ್ಯಾಸಿಗಳ ಮುಂದಿಡಲಾಗಿದೆ.

ಸ್ಥಳಾಂತರದಲ್ಲಿದ್ದು ಪುಸ್ತಕವನ್ನು ಅಚ್ಚುಮಾಡಿಸಬೇಕಾಗಿ ಬಂದುದರಿಂದ, ಅಲ್ಲಲ್ಲಿ ತಪ್ಪುಗಳು ಕಂಡು ಬಂದಿವೆ. ಓದುಗರು ತಿದ್ದುಪಡಿಯ ಸಹಾಯದಿಂದ ದೋಷಗಳನ್ನು ತಿದ್ದಿಕೊಳ್ಳಬೇಕಾಗಿ ಕೋರಿಕೆ.

ಈ ಗ್ರಂಥದ ಪ್ರಕಟಣೆಯ ಭಾರವನ್ನು ವಹಿಸಿದ ಶ್ರೀಯುತರುಗಳಾದ ಡಿ. ವಿ. ನಾರಾಯಣಮೂರ್ತಿಯವರಿಗೂ, ಅವರ ಸಹೋದರರಾದ ಡಿ. ವಿ. ಗಂಗಾಧರಶೆಟ್ಟರವರಿಗೂ ಮತ್ತು ಇತರ ವಿಧಗಳಲ್ಲಿ ಸಹಾಯ ಮಾಡಿದ ನನ್ನ ಮಿತ್ರರಿಗೂ ಬಹಳ ಕೃತಜ್ಞನಾಗಿರುತ್ತೇನೆ.

ನನ್ನ ಹಿಂದಿನ ವ್ಯಾಕರಣಸಾರವು ಮೈಸೂರು ದೇಶಕ್ಕೆ ಪ್ರಜಾಸ್ವಾತಂತ್ರ್ಯವು ಲಭಿಸಿದ ದಿನದಲ್ಲಿ ಪ್ರಕಟವಾದಂತೆ, ಈ ಪುಸ್ತಕವೂ ಭಾರತದ ಪ್ರಥಮ ವರ್ಷದ ಸ್ವಾತಂತ್ರ್ಯೋತ್ಸವದ ಸಮಯದಲ್ಲಿ ಹೊರಬಿದ್ದಿರುವುದರಿಂದ, ಇದು **ರಾಜ್ಯಲಕ್ಷ್ಮಿಯ** ಸವಿನೆನಪಿನ ಮುಡುಪಾಗಿರಲಿ.

ಮಧುಗಿರಿ
೧೫–೮–೪೮

**ತಿರು. ಶ್ರೀನಿವಾಸಾಚಾರ್ಯ**
ಕನ್ನಡ ಪಂಡಿತ,
ಸರ್ಕಾರಿ ಪ್ರೌಢಶಾಲೆ, ಮಧುಗಿರಿ.

# ವಿ ಷ ಯ ಸೂ ಚಿ.

ಪ್ರೌಢಶಾಲಾ

# ವ್ಯಾಕರಣಸಾರ

## ೧. ಅಕ್ಷರಗಳು

ಕನ್ನಡ ಭಾಷೆಯಲ್ಲಿ ೪೯ ಅಕ್ಷರಗಳಿವೆ. ಇವುಗಳಲ್ಲಿ ಅಕಾರದಿಂದ ಔಕಾರದವರೆಗೂ ೧೪ ಸ್ವರಗಳು. ಕಕಾರದಿಂದ ಳಕಾರದವರೆಗೂ ೩೪ ವ್ಯಂಜನಗಳು. ಇವುಗಳ ವಿವರ ಈ ಕ್ರಮದಲ್ಲಿದೆ :—

### (ಅ) ಸ್ವರಗಳು

ಹ್ರಸ್ವಸ್ವರ—ಅ ಇ ಉ ಋ ಎ ಒ (೬)
ದೀರ್ಘಸ್ವರ—ಆ ಈ ಊ ೠ ಏ ಐ ಓ ಔ (೮)

### (ಆ) ವ್ಯಂಜನಗಳು

**ವರ್ಗೀಯ ವ್ಯಂಜನ :—**

ಕ ಚ ಟ ತ ಪ ವರ್ಗಗಳಿಂದ ಸೇರಿ ಆಗುವ ೨೫ ಅಕ್ಷರಗಳು.

### ಐದು ವರ್ಗಗಳ ವಿವರ

ಕವರ್ಗ—ಕ ಖ ಗ ಘ ಙ
ಚವರ್ಗ—ಚ ಛ ಜ ಝ ಞ
ಟವರ್ಗ—ಟ ಠ ಡ ಢ ಣ
ತವರ್ಗ—ತ ಥ ದ ಧ ನ
ಪವರ್ಗ—ಪ ಫ ಬ ಭ ಮ

ಒಂದೊಂದು ವರ್ಗದಲ್ಲೂ ಅಲ್ಪಪ್ರಾಣ, ಮಹಾಪ್ರಾಣ, ಅನುನಾಸಿಕವೆಂಬ ಮೂರುವಿಧ ಸಂಜ್ಞೆಗಳಿವೆ.

ಅಲ್ಪಪ್ರಾಣ—ಕ ಗ ಚ ಜ ಟ ಡ ತ ದ ಪ ಬ
ಮಹಾಪ್ರಾಣ—ಖ ಘ ಛ ಝ ಠ ಢ ಥ ಧ ಫ ಭ
ಅನುನಾಸಿಕ—ಙ ಞ ಣ ನ ಮ

**ಅವರ್ಗೀಯ ವ್ಯಂಜನ**

ಯ ರ ಲ ವ ಶ ಷ ಸ ಹ ಳ (೯)

ಅನುಸ್ವಾರ (ಂ), ವಿಸರ್ಗ (ಃ) ಗಳು ಯೋಗವಾಹಗಳೆಂದು ಕರೆಯಲ್ಪಡುವುವು. ಇವುಗಳೂ ವ್ಯಂಜನಗಳಾಗಬಹುದು. ಏಕೆಂದರೆ ಇವುಗಳಿಗೆ ಸ್ವಂತ ಉಚ್ಚಾರಣೆಯಿಲ್ಲ. ವರ್ಣಗಳ ಜೊತೆಗೆ ಸೇರಿ ಉಚ್ಚರಿಸಶಕ್ಯವು.

ಉದಾ:— ಕ್ + ಅ = ಕ, ಅ + ಂ = ಅಂ, ಅ + ಃ = ಅಃ

ಅಕ್ಷರ ಸಂಖ್ಯೆಯಲ್ಲಿ ಯೋಗವಾಹಗಳನ್ನೂ ಸೇರಿಸಿ ೪೭ ಎಂದು ಹೇಳುವುದುಂಟು.

## ೨. ಸಂಧಿ

೧. ಅಕ್ಷರಗಳು ಎಡಬಿಡದೆ ಸೇರುವುದು **ಸಂಧಿ** ಎನಿಸುವುದು. ಪ್ರಕೃತಿ ಪ್ರತ್ಯಯಗಳು ಸೇರುವಾಗ **ಪದಮಧ್ಯ**ಸಂಧಿಯೂ, ಭಿನ್ನ ಪದಗಳು ಸೇರುವಾಗ **ಪದಾಂತ**ಸಂಧಿಯೂ ನಡೆಯುವುವು. ಉದಾ:—

(ಅ) ಪದಮಧ್ಯ ಸಂಧಿ—ಮಗು + ಅನ್ನು = ಮಗುವನ್ನು
(ಆ) ಪದಾಂತ್ಯ ಸಂಧಿ—ಕುರಿ + ಇಲ್ಲ = ಕುರಿಯಿಲ್ಲ

ಸಂಧಿಯಾಗುವಾಗ ಒಂದಕ್ಷರವು ಹೋಗುವುದು **ಲೋಪ**ವೆಂದೂ ಹೊಸದಾಗಿ ಒಂದಕ್ಷರವು ಬರುವುದು **ಆಗಮ**ವೆಂದೂ, ಒಂದಕ್ಷರಕ್ಕೆ ಪ್ರತಿಯಾಗಿ ಮತ್ತೊಂದಕ್ಷರವು ಬರುವುದು **ಆದೇಶ**ವೆಂದೂ ತಿಳಿಯಬೇಕು. ಇವು ಮೂರೂ ಸಂಧಿ ಕಾರ್ಯಗಳು.

### ೧. ಕನ್ನಡ ಸಂಧಿಗಳು

೧. **ಲೋಪಸಂಧಿ**—ಸ್ವರಕ್ಕೆ ಸ್ವರ ಪರವಾದಾಗ ಅರ್ಥವು ಕೆಡದ ಸಂದರ್ಭಗಳಲ್ಲಿ ಹಿಂದಿನ ಸ್ವರಕ್ಕೆ ಲೋಪ ಬರುವುದು

ಉದಾ.— ಮಾವಿನ + ಎಲೆ = ಮಾವಿನೆಲೆ

[ಸೂ. ಇಲ್ಲಿ ಅಕಾರವು ಲೋಪವಾಗಿದೆ.]

೨. **ಆಗಮ ಸಂಧಿ**—ಸಂಧಿಕಾರ್ಯದಲ್ಲಿ 'ಯ' ಕಾರವಾಗಲಿ 'ವ' ಕಾರವಾಗಲಿ ಬರುವುದು.

'ಯ' ಕಾರಾಗಮಕ್ಕೆ :—

ಮನೆ + ಇಂದ = ಮನೆಯಿಂದ

'ವ' ಕಾರಾಗಮಕ್ಕೆ :—

ಮಗು + ಇದು = ಮಗುವಿದು

೩. **ಆದೇಶ ಸಂಧಿ**—ಸಂಧಿಮಾಡುವಾಗ ಪರಪದದ ಕೊನೆಯಲ್ಲಿರುವ ವರ್ಗ ಪ್ರಥಮಾಕ್ಷರಗಳಿಗೆ ಅದೇ ವರ್ಗದ ತೃತೀಯಾಕ್ಷರಗಳು ಬರುವುದು.

ಉದಾ.— ೧. ಅಡಿ + ಕಲ್ಲು = ಅಡಿಗಲ್ಲು

ಪೊನ್ + ತಳಿರ್ = ಪೊಂಡಳಿರ್

ಪೂ + ಬುಟ್ಟಿ = ಪೂ ಬುಟ್ಟಿ

೨. ಅರ್ಥವು ಕೆಡುವ ಸಂದರ್ಭಗಳಲ್ಲಿ (ಸಂಬೋಧನೆ, ಪ್ರಶ್ನೆ, ಮೆಚ್ಚಿಗೆ ಮುಂತಾದೆಡೆಗಳಲ್ಲಿ) ಸಂಧಿಕಾರ್ಯವು ಬರುವುದಿಲ್ಲ. ಇದಕ್ಕೆ **ಪ್ರಕೃತಿಭಾವ** ವೆಂದು ಹೆಸರು.

ಉದಾ.— ರಂಗಾ ಓಡಿ ಬಾ ; ತಂದನೇ ಇಲ್ಲವೇ ? ; ಆಹಾ ಏನು ?

## ೩. ಸಂಸ್ಕೃತ ಸಂಧಿಗಳು

### ೧. ಸಂಸ್ಕೃತ ಸ್ವರ ಸಂಧಿಗಳು

೧. **ಸವರ್ಣದೀರ್ಘ ಸಂಧಿ**—ಸವರ್ಣ ಸ್ವರಗಳಿಗೆ ಒಂದೇ ದೀರ್ಘಾದೇಶ ಬರುವುದು.

[ಸವರ್ಣ ಸ್ವರಗಳು: ಅ ಆ ; ಇ ಈ ; ಉ ಊ]

ಉದಾ.— ಕಮಲ + ಅಧಿಪ = ಕಮಲಾಧಿಪ

೨. **ಗುಣ ಸಂಧಿ**—ಅವರ್ಣಕ್ಕೆ ಇವರ್ಣವು ಸೇರಿ ಏಕಾರವೂ, ಉವರ್ಣದೊಡನೆ ಓಕಾರವೂ, ಋವರ್ಣದೊಡನೆ ಅರ್‌ಕಾರವೂ ಬರುವುದು.

ಉದಾ.—ಗಣ + ಈಶ = ಗಣೇಶ; ಗಂಗಾ + ಉದಕ = ಗಂಗೋದಕ; ಮಹ + ಋಷಿ = ಮಹರ್ಷಿ

೩. **ವೃದ್ಧಿ ಸಂಧಿ**—ಅ ವರ್ಣದ ಮುಂದೆ, ಏ ಐ, ಓ ಔ ಗಳು ಬಂದಾಗ ವೃದ್ಧಿ ಸಂಜ್ಞೆಯ ಐ ಔ ಕಾರಗಳು ಬರುವುವು.

ಉದಾ.— ಸಕಲ + ಐಶ್ವರ್ಯ = ಸಕಲೈಶ್ವರ್ಯ; ಮಹಾ + ಔನ್ನತ್ಯ = ಮಹೌನ್ನತ

೪. **ಯಣ್ಸಂಧಿ**—ಸಂಧಿ ಮಾಡಿದಾಗ "ಯ ರ ವ" ವರ್ಣಗಳು ಬರುವುದು.

ಉದಾ.—ಅತಿ + ಆನಂದ = ಅತ್ಯಾನಂದ (ಯ) ; ಪಿತೃ + ಆಲಯ = ಪಿತ್ರಾಲಯ (ರ)
ಗುರು + ಆಜ್ಞೆ = ಗುರುವಾರ್ಜ್ಞೆ (ವ)

## ೨. ವ್ಯಂಜನ ಸಂಧಿಗಳು

೧. **ಶ್ಚುತ್ವ ಸಂಧಿ**—ಸಂಧಿಕಾಲದಲ್ಲಿ ಸಕಾರಕ್ಕೆ ಶಕಾರವೂ ತವರ್ಗಕ್ಕೆ ಚವರ್ಗವೂ ಆದೇಶವಾಗಿ ಬರುವುದು.

ಉದಾ.—ತಪಸ್ + ಶೇಷ = ತಪಶ್ಶೇಷ ; ಯಶಸ್ + ಚಂದ್ರ = ಯಶಶ್ಚಂದ್ರ

೨. **ಷ್ಟುತ್ವ ಸಂಧಿ**—ಸಂಧಿಕಾಲದಲ್ಲಿ ಸಕಾರ ತ ವರ್ಗಗಳಿಗೆ ಕ್ರಮವಾಗಿ ಷಕಾರ ಟವರ್ಗಗಳು ಬರುವುವು.

ಉದಾ.—ತಪಸ್ + ಷಡ್ಭಾಗ = ತಪಷ್ಷಡ್ಭಾಗ ; ಲಸತ್ + ಡಮರುಗ = ಲಸಡ್ಡಮರುಗ

೩. **ಜಶ್ತ್ವ ಸಂಧಿ**—ಸಂಧಿಕಾಲದಲ್ಲಿ ಪೂರ್ವಪದದ ಕೊನೆಯಲ್ಲಿರುವ ವರ್ಗ ಪ್ರಥಮಾಕ್ಷರಗಳಿಗೆ ಅದೇ ವರ್ಗದ ತೃತೀಯಾಕ್ಷರಗಳು ಬರುವುವು.

ಉದಾ.—ಷಟ್ + ಅಂಗ = ಷಡಂಗ ; ಬಲವತ್ + ವಿರೋಧಿ = ಬಲವದ್ವಿರೋಧಿ

೪. **ಛತ್ವಸಂಧಿ**—ಸಂಧಿಕಾಲದಲ್ಲಿ ಶಕಾರಕ್ಕೆ ಛಕಾರ ಆದೇಶವಾಗಿ ಬರುವುದು. ಉದಾ— ಸತ್ + ಶಿಷ್ಯ = ಸಚ್ಛಿಷ್ಯ

೫. ಅನುನಾಸಿಕ ಸಂಧಿ—ಸಂಧಿ ಕಾಲದಲ್ಲಿ ಆಯಾವರ್ಗಾಕ್ಷರದ ಕೊನೆಯ ಅಕ್ಷರಗಳು ಬರುವುವು

ಉದಾ—ಭಗವತ್ + ನಾಮ = ಭಗವನ್ನಾಮ

೬. ವಿಸರ್ಗ ಸಂಧಿ—(ವಿಸರ್ಗವು ಬಂದಿರುವುದು) ಉದಾ.—

ಅಂತರ್ + ಕರಣ = ಅಂತಃಕರಣ ಮನಸ್ + ಕಷಾಯ = ಮನಃಕಷಾಯ

## ಅಭ್ಯಾಸ ೧

೧ ಕನ್ನಡ ವರ್ಣಮಾಲೆಯಲ್ಲಿ ಇರುವ ಅಕ್ಷರಗಳೆಷ್ಟು? ಅವುಗಳನ್ನು ಎಷ್ಟು ಗುಂಪುಗಳನ್ನಾಗಿ ಮಾಡಿ ಹೇಳಬಹುದು

೨ ಸಂಧಿಯೆಂದರೇನು? ಅದರಲ್ಲಿರುವ ಮುಖ್ಯ ವಿಧಗಳಾವುವು?

೩ ಮುಂದೆ ಕೊಟ್ಟಿರುವ ಪದಗಳನ್ನು ಬಿಡಿಸಿ ಬರೆದು ಸಂಧಿಯ ಹೆಸರನ್ನು ತಿಳಿಸಿ :—

ಪ್ರೌಢೋಟ, ಅತ್ಯಾಸೆ, ಮಿತಾಹಾರ, ಮಹೇಶ, ಕೋಪೋದ್ರೇಕ, ದುಷ್ಪುತ್ರ, ಲೋಕೈಕವೀರ, ಸಜ್ಜನ, ಮನಶ್ಶುದ್ಧಿ, ಸನ್ಮಿತ್ರ, ಸ್ವರಾಜ್ಯ.

೪ ಇವುಗಳನ್ನು ಸೇರಿಸಿ ಬರೆಯಿರಿ :—

ಮನೆ + ಅನ್ನು ; ಮನೆ + ಕೆಲಸ ; ಗುಡಿ + ಇಂದ ; ಸತ್ + ಮಣಿ

೫ ಪ್ರಕೃತಿಭಾವವೆಂದರೇನು ?

---

## ೩. ಕನ್ನಡ ಶಬ್ದಗಳು

ಕನ್ನಡ ಭಾಷೆಯಲ್ಲಿರುವ ಶಬ್ದಗಳನ್ನು ದೇಶ್ಯ, ಅನ್ಯದೇಶ್ಯಗಳೆಂಬ ಎರಡು ಮುಖ್ಯ ಭೇದಗಳಿಂದ ವಿಂಗಡಿಸಬಹುದಾಗಿದೆ. ಅಚ್ಚಗನ್ನಡ ಶಬ್ದಗಳು ದೇಶ್ಯಗಳು; ಕನ್ನಡದಲ್ಲಿ ಬಳಕೆಯಲ್ಲಿರುವ ಸಂಸ್ಕೃತ, ಹಿಂದುಸ್ಥಾನಿ, ಇಂಗ್ಲೀಷ್ ಮೊದಲಾದ ಭಾಷೆಗಳ ಶಬ್ದಗಳು ಅನ್ಯದೇಶ್ಯ ಶಬ್ದಗಳು.

ಉದಾ.— ದೇಶ್ಯ : ನೆಲ, ಹೊಲ
ಸಂಸ್ಕೃತ : ಕಾರ್ಯ, ನದಿ
ಇಂಗ್ಲೀಷ್ : ಮೈಲಿ, ಕಾರ್ಡು

ಸಂಸ್ಕೃತ ಶಬ್ದಗಳು ತತ್ಸಮ ಮತ್ತು ತದ್ಭವಗಳೆಂಬ ಎರಡು ರೀತಿಗಳಲ್ಲಿವೆ. ಸಂಸ್ಕೃತಕ್ಕೆ ಸಮಾನವಾದುದು ತತ್ಸಮವು. ಸಂಸ್ಕೃತದಿಂದ ವಿಕಾರ ಹೊಂದಿ ಕನ್ನಡಕ್ಕೆ ಬಂದಿರುವುದು ತದ್ಭವವು.

ಉದಾ.—

| ಸಂ. | ತತ್ಸಮ | ತದ್ಭವ |
| --- | --- | --- |
| ಪಾತ್ರ | ಪಾತ್ರೆ | ಪಡ್ಡ |
| ಘಂಟಾ | ಘಂಟೆ | ಗಂಟೆ |
| ಶ್ರೀ | ಶ್ರೀ | ಸಿರಿ |
| ಆಶ್ಚರ್ಯ | ಆಶ್ಚರ್ಯ | ಅಚ್ಚರಿ |

## ೪. ಪದಸ್ವರೂಪ

ಅರ್ಥವಾಗುವ ಮಾತುಗಳನ್ನು **ಪದ** ಅಥವಾ **ಶಬ್ದ**ವೆನ್ನುವೆವು. ಸಾಧಾರಣವಾಗಿ **ಪ್ರಕೃತಿಗೆ ಪ್ರತ್ಯಯವನ್ನು** ಸೇರಿಸಲಾಗಿ ಪದವಾಗುವುದು. ಕೆಲವಕ್ಕೆ ಪ್ರಕೃತಿಸ್ವರೂಪದಲ್ಲೇ ಪದಸಂಜ್ಞೆಯುಂಟು. **ಪ್ರಕೃತಿಯು** (ಅಥವಾ ಪ್ರಾತಿಪದಿಕ) ನಾಮಪದಕ್ಕೆ ಮೂಲವಾಗಿದ್ದರೆ **ನಾಮಪ್ರಕೃತಿ**ಯೆಂದೂ, ಕ್ರಿಯಾಪದಕ್ಕೆ ಮೂಲವಾಗಿದ್ದರೆ **ಧಾತು**ವೆಂದೂ (ಅಥವಾ ಕ್ರಿಯಾಪ್ರಕೃತಿಯೆಂದೂ) ಯಾವ ವ್ಯತ್ಯಾಸವೂ ಹೊಂದದೆ ಒಂದೇ ರೀತಿಯಾಗಿ ನಿಂತರೆ **ಅವ್ಯಯ**ವೆಂದೂ ಮೂರು ವಿಧವಾಗಿ ವ್ಯವಹರಿಸಲ್ಪಡುತ್ತವೆ.

ಪದಗಳಲ್ಲಿ **ನಾಮಪದ, ಕ್ರಿಯಾಪದ** ಮತ್ತು **ಅವ್ಯಯ**ಗಳೆಂದು ಮೂರು ಭೇದಗಳಿವೆ. ಉದಾ:—

ನಾಮಪದ: ಬಸವನು ಅವ್ಯಯ: ಬೇಗನೆ ಕ್ರಿಯಾಪದ: ಬಂದನು

## ೫. ನಾಮಪದ

ನಾಮಪದಗಳು ಯಾವುದಾದರೊಂದು ಪದಾರ್ಥ, ಊರು, ಪ್ರಾಣಿ ಮತ್ತು ವ್ಯಕ್ತಿಯ ಹೆಸರನ್ನು ತಿಳಿಸುತ್ತವೆ.

ಉದಾ.—ಪೆಟ್ಟಿಗೆ, ಮೈಸೂರು, ನಾಯಿ, ಕೃಷ್ಣ, ರಾಧೆ, ಮುಂತಾದುವು.

ನಾಮಪ್ರಕೃತಿಗಳಿಗೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸುವುದರಿಂದ ನಾಮಪದಗಳಾಗುವುವು. ಉದಾ.—ಭಾರತ + ಉ= ಭಾರತವು

ಮಧುಗಿರಿ + ಅಲ್ಲಿ–ಮಧುಗಿರಿಯಲ್ಲಿ

**ನಾಮಪದದ ವಿಧಗಳು**—ನಾಮಪದದಲ್ಲಿ ಈ ಕೆಳಗೆ ಕಂಡಂತೆ ನಾಲ್ಕು ವಿಧಗಳುಂಟು.

| ವಿಧ | ಉದಾಹರಣೆ |
|---|---|
| ೧. ನಾಮವಾಚಕ | ಮನುಷ್ಯ |
| ೨. ಗುಣವಾಚಕ | ಒಳ್ಳೆಯ |
| ೩. ಸಂಖ್ಯಾವಾಚಕ | ಒಂದು |
| ೪. ಸರ್ವನಾಮ | ಅವರು |

**೧. ನಾಮವಾಚಕ—**

ಬಗೆಬಗೆಯ ಪದಾರ್ಥಗಳ ಅಥವಾ ವಿಷಯಗಳ ಹೆಸರನ್ನು ತಿಳಿಸುವ ನಾಮಪದಕ್ಕೆ ನಾಮವಾಚಕವೆಂದು ಹೆಸರು. ಇದರಲ್ಲಿ ನಾಲ್ಕು ವಿಧಗಳು

(ಅ) **ರೂಢನಾಮ** (ರೂಢಿಯಿಂದ ಬಂದ ಹೆಸರುಗಳು)—
ಬೆಟ್ಟ, ನದಿ, ಮನುಷ್ಯ.

(ಆ) **ಅಂಕಿತನಾಮ** (ವ್ಯಕ್ತಿಯನ್ನಾಗಲಿ, ಪ್ರದೇಶವನ್ನಾಗಲಿ ಗುರುತಿಸುವುದು) ಗೋಪಾಲ, ಕಾವೇರಿ.

(ಇ) **ಅನ್ವರ್ಥನಾಮ** (ಹೆಸರಿಗೆ ತಕ್ಕಂತಿರುವುದು)
ಕುಂಟ, ಕುರುಡ.

(ಈ) **ಭಾವನಾಮ** (ವಸ್ತುವಿನ ಸ್ಥಿತಿ, ಸ್ವಭಾವಗಳನ್ನು ತಿಳಿಸುವುದು) ಕಪ್ಪು, ಜಾಣ್ಮೆ, ಬಡತನ.

**೨. ಗುಣವಾಚಕ—**

ವ್ಯಕ್ತಿಯ ಅಥವಾ ವಸ್ತುವಿನ ಗುಣವನ್ನು ತಿಳಿಸುವ ಶಬ್ದಗಳು ಗುಣವಾಚಕಗಳು. ಇವು **ಕಾರಕ** ಮತ್ತು **ವಿಶೇಷಣ**ಗಳೆಂಬ ಎರಡು ರೂಪಭೇದವನ್ನು ಹೊಂದುವುವು. **ಪರಿಮಾಣ** ಮತ್ತು **ಪ್ರಕಾರವಾಚಕಗಳು** ಇದರ ಒಳ ಭೇದಗಳು.

(ಅ) **ಕಾರಕರೂಪ** (ಸ್ವತಂತ್ರವಾಗಿರುವುದು)
ಉದಾ: ಒಳ್ಳೆಯವನು, ಒಳ್ಳೆಯವಳು, ಒಳ್ಳೆಯದು.

(ಆ) **ವಿಶೇಷಣ ರೂಪ** (ನಾಮಪದಕ್ಕೆ ಅಧೀನವಾಗಿರುವುದು)
ಉದಾ: ಒಳ್ಳೆಯ ಹಸು, ಕೆಟ್ಟ ಹುಡುಗ, ಇಷ್ಟು ಮಂದಿ.

(ಇ) ಪರಿಮಾಣವಾಚಕ (ಅಳತೆಯನ್ನು ತಿಳಿಸುವುದು)
ಉದಾ: ಅಷ್ಟು, ಇಷ್ಟು, ಎಷ್ಟು.

(ಈ) ಪ್ರಕಾರವಾಚಕ (ರೀತಿಯನ್ನು ತಿಳಿಸುವುದು)
ಅಂತಹ, ಇಂತಹ, ಎಂತಹ.

### ೩. ಸಂಖ್ಯಾವಾಚಕ—

ಎಣಿಕೆ (ಸಂಖ್ಯೆ)ಯನ್ನು ತಿಳಿಸುವ ನಾಮಪದಗಳು ಸಂಖ್ಯಾವಾಚಕಗಳು. ಇದರಲ್ಲಿಯೂ ಕಾರಕ ಮತ್ತು ವಿಶೇಷಣ ರೂಪಗಳುಂಟು.

ಉದಾ: ಕಾರಕರೂಪ—ಒಂದು, ಒಬ್ಬನು, ಇಬ್ಬರು.

ವಿಶೇಷಣರೂಪ—ಒಬ್ಬ ಹುಡುಗ, ನಾಲ್ಕು ಗೋಲಿಗಳು.

### ೪. ಸರ್ವನಾಮ—

ನಾಮಪದದ ಸ್ಥಾನದಲ್ಲಿ ಉಪಯೋಗವಾಗುವ ಶಬ್ದಕ್ಕೆ ಸರ್ವನಾಮವೆಂದು ಹೆಸರು. ಇದರಲ್ಲಿ ಮೂರು ವಿಧಗಳಿವೆ

**(ಅ) ಪುರುಷವಾಚಕ (ಆ) ಪ್ರಶ್ನಾರ್ಥಕ (ಇ) ಆತ್ಮಾರ್ಥಕ**

**(ಅ) ಪುರುಷವಾಚಕ ಸರ್ವನಾಮಗಳು**

**ಪ್ರಥಮ ಮಧ್ಯಮ** ಮತ್ತು **ಉತ್ತಮ** ಗಳೆಂಬ ಮೂರುವಿಧ ಪುರುಷಗಳಲ್ಲಿ ಬರುವ ಸರ್ವನಾಮಗಳು.

**(ಅ) ಪುರುಷವಾಚಕ ಸರ್ವನಾಮ**

| ಪುರುಷ | ಲಿಂಗ | ವಚನ | |
|---|---|---|---|
| | | ಏಕ | ಬಹು |
| ಪ್ರಥಮ | ಪುಲ್ಲಿಂಗ | ಅವನು | ಅವರು |
| | ಸ್ತ್ರೀಲಿಂಗ | ಅವಳು | ಅವರು |
| | ನಪುಂಸಕ | ಅದು | ಅವು |
| ಮಧ್ಯಮ | | ನೀನು | ನೀವು |
| ಉತ್ತಮ | | ನಾನು | ನಾವು |

**(ಆ) ಪ್ರಶ್ನಾರ್ಥಕ ಸರ್ವನಾಮ.** (ಪ್ರಶ್ನೆ ರೂಪದಲ್ಲಿರತಕ್ಕವು)

| | | |
|---|---|---|
| ಉದಾ: | ಪು. ಯಾವನು | ಯಾರು |
| | ಸ್ತ್ರೀ. ಯಾವಳು | ಯಾರು |
| | ನ. ಯಾವುದು ಏನು | ಯಾವುವು |

**(ಇ) ಆತ್ಮಾರ್ಥಕ ಸರ್ವನಾಮ** ಉದಾ: ತಾನು ತಾವು

## ಅಭ್ಯಾಸ ೨.

೧ ಕನ್ನಡ ಭಾಷೆಯಲ್ಲಿ ಬಳಕೆಯಲ್ಲಿರುವ ಶಬ್ದಗಳಾವುವು ?
೨ ಪದವೆಂದರೇನು ? ಪದಗಳಲ್ಲಿರುವ ಮುಖ್ಯ ಭೇದಗಳಾವುವು ?
೩ ಮುಂದೆ ಕೊಟ್ಟಿರುವ ಪದಗಳು ಯಾವ ಹೆಸರಿನಿಂದ ಕರೆಯಲ್ಪಡುವುವು
ಬೆಟ್ಟ, ಹಾಸನ, ರಂಗ, ನಡೆ. ನೋಡುವೆನು, ಮೆಲ್ಲಗೆ, ಹೀಗೆ, ನಾಲ್ಕು, ಕೆಟ್ಟ, ಸಾವು, ದಡ್ಡತನ, ನೀವು, ಯಾರು.
೪ ನಾಮಪದವೆಂದರೇನು ? ಇದರಲ್ಲೆಷ್ಟು ವಿಧವುಂಟು ?
೫ ಸರ್ವನಾಮವೆಂದರೇನು ? ಇದರ ಒಳ ಭೇದಗಳಾವುವು ?
೬ ಅ) ನಿಮ್ಮ ತಮ್ಮನೂ ನಾನೂ ಸ್ನೇಹಿತರು.
ಆ) ಅವರಿಂದ ನಿನಗೆ ಏನು ಆಗಬೇಕು?
ಈ ವಾಕ್ಯಗಳಲ್ಲಿ ಸರ್ವನಾಮಗಳಾವುವು ?

---

## ೬. ಲಿಂಗ; ವಚನ ಮತ್ತು ವಿಭಕ್ತಿ

ನಾಮಪದಗಳೆಲ್ಲಕ್ಕೂ ಲಿಂಗ, ವಚನ ಮತ್ತು ವಿಭಕ್ತಿಗಳುಂಟು. ಇವುಗಳಿಂದಲೇ ಪದಸ್ವರೂಪವು ತಿಳಿಯಬರುವುದು.

**ಲಿಂಗ—** ಲಿಂಗಗಳಲ್ಲಿ ಮುಖ್ಯವಾಗಿ ಮೂರು ವಿಧಗಳಿವೆ. ಗಂಡಸರನ್ನು ಹೇಳುವ ಪದಗಳು **ಪುಲ್ಲಿಂಗ**ಗಳು. ಹೆಂಗಸರನ್ನು ಹೇಳುವ ಪದಗಳು **ಸ್ತ್ರೀಲಿಂಗ**ಗಳು. ಉಳಿದುವೆಲ್ಲಾ **ನಪುಂಸಕಲಿಂಗ**ಗಳು.

ಉದಾ: ಪು. ತಂದೆ, ಹುಡುಗ, ನರಸಿಂಹ
ಸ್ತ್ರೀ. ತಾಯಿ, ಹುಡುಗಿ, ಬಾಗಮ್ಮ
ನ. ಹೊಳೆ, ಗಿಡ, ಕಪಿ

ಕೆಲವು ಶಬ್ದಗಳನ್ನು ಎರಡು ಮೂರು ಲಿಂಗಗಳಲ್ಲಿಯೂ, ಪ್ರಯೋಗಿಸಿ ಹೇಳುವುದುಂಟು.

ಪುಂ. ಸ್ತ್ರೀ,—ಅವರು, ಇವರು. (ಗಂಡಸರು ಹೆಂಗಸರು)
ಪು. ನ.—ಚಂದ್ರ ಹುಟ್ಟಿದನು. ಚಂದ್ರ ಹುಟ್ಟಿತು
ಸ್ತ್ರೀ. ನ.—ದೇವತೆ ಬಂತು. ಅವಳು ದೇವತೆ.

**ವಾಚ್ಯಲಿಂಗ—**

(ವಿಶೇಷ್ಯಕ್ಕೆ ಅಧೀನವಾಗಿರುವ ಲಿಂಗ. ಇದನ್ನು ಮೂರು ಲಿಂಗಗಳಲ್ಲಿಯೂ ಪ್ರಯೋಗಿಸಬಹುದು.) ಉದಾ: ನೀನು ತಂದೆ, ನೀನು ತಾಯಿ, ನೀನು ಹಸು. (ಹಾಗೆಯೇ ನಾನು ಎಂಬುವನ್ನೂ ಹೇಳಬಹುದು)

ಪುಲ್ಲಿಂಗ ಶಬ್ದಗಳು ಇತಿ, ಇತ್ತಿ, ಗಿತ್ತಿ, ಎ, ಇ, ಅಳು ಮೊದಲಾದ ಸ್ತ್ರೀವಾಚಕ ಪ್ರತ್ಯಯಗಳನ್ನು ಹೊಂದುವುದರಿಂದ ಸ್ತ್ರೀಲಿಂಗ ಶಬ್ದಗಳಾಗುವುವು ಉದಾ: ಬೀಗಿತಿ, ಹೂವಾಡಿಗಿತ್ತಿ, ಬೆಸ್ತಗಿತ್ತಿ, ಜಾಣೆ; ಕುರುಡಿ ಮಗಳು

## ವಚನ

ಒಂದನ್ನು ಕುರಿತು ಹೇಳುವ ಶಬ್ದವು **ಏಕವಚನವು**. ಒಂದಕ್ಕಿಂತ ಹೆಚ್ಚಾದುದೆಲ್ಲಾ **ಬಹುವಚನವು.** ಇವೆರಡೂ ಕನ್ನಡದಲ್ಲಿವೆ. ಸಂಸ್ಕೃತದಲ್ಲಿ **ದ್ವಿವಚನವುಂಟು.** (ಎಂದರೆ ಎರಡನ್ನು ಮಾತ್ರ ಸೂಚಿಸತಕ್ಕವು.)

(ಅ) ಏಕವಚನ—ಮನ, ಪುಸ್ತಕ, ಒಂದು
(ಆ) ಬಹುವಚನ—ಮನಗಳು, ಪುಸ್ತಕಗಳು, ಹತ್ತು
(ದ್ವಿವಚನ—ಕಿವಿಗಳು, ಕಣ್ಣುಗಳು, ಎರಡು)

ನಾಮಪ್ರಕೃತಿಗಳು ಬಹುವಚನದಲ್ಲಿ ಗಳು, ಅರು, ಅಂದಿರು ವರು ಬರು ಮೊದಲಾದ ಪ್ರತ್ಯಯಗಳನ್ನು ಹೊಂದುತ್ತವೆ. ಉದಾ: ಮರಗಳು, ಅರಸರು, ಅಣ್ಣಂದಿರು, ಇರುವರು, ಆಸಿಬರು.

## ವಿಭಕ್ತಿ

ವಿಭಕ್ತಿಗಳಲ್ಲಿ ಏಳು ವಿಧಗಳುಂಟು. (ಕನ್ನಡದಲ್ಲಿ ಪಂಚಮೀ ವಿಭಕ್ತಿಯ ಬಳಕೆಯು ಕಡಿಮೆ) ನಾಮಪ್ರಕೃತಿಗಳಮೇಲೆ ಎರಡು ವಚನಗಳಲ್ಲಿಯೂ ವಿಭಕ್ತಿ ಪ್ರತ್ಯಯಗಳು ಹತ್ತುವುವು.

| ವಿಭಕ್ತಿಯ ಹೆಸರು | ಪ್ರತ್ಯಯ | ಉದಾ. ಏಕವಚನದಲ್ಲಿ |
|---|---|---|
| ೧ ಪ್ರಥಮಾ | ಉ | ಮಗುವು |
| ೨ ದ್ವಿತೀಯಾ | ಅನ್ನು | ಮಗುವನ್ನು |
| ೩ ತೃತೀಯಾ | ಇಂದ | ಮಗುವಿನಿಂದ |
| ೪ ಚತುರ್ಥೀ | ಇಗೆ, ಗೆ, ಕ್ಕೆ | ಮಗುವಿಗೆ |
| ೫ ಪಂಚಮೀ | ದೆಸೆಯಿಂದ | ಮಗುವಿನ ದೆಸೆಯಿಂದ |
| ೬ ಷಷ್ಠೀ | ಅ | ಮಗುವಿನ |
| ೭ ಸಪ್ತಮೀ | ಅಲ್ಲಿ | ಮಗುವಿನಲ್ಲಿ |
| (ಸಂಬೋಧನ ಪ್ರಥಮಾ | ಏ | ಮಗುವೇ, ಮಗು |

ಬಹುವಚನದಲ್ಲಿ—ಮಕ್ಕಳು, ಮಕ್ಕಳನ್ನು, ಮಕ್ಕಳಿಂದ, ಮಕ್ಕಳಿಗೆ ಮಕ್ಕಳದೆಸೆಯಿಂದ, ಮಕ್ಕಳ, ಮಕ್ಕಳಲ್ಲಿ, ಮಕ್ಕಳೇ— ಹೀಗೆ ರೀತಿ ರೂಪಗಳಾಗುವುವು.

## ಕಾರಕಾರ್ಥಗಳು

ವಾಕ್ಯದಲ್ಲಿ ನಾಮಪ್ರಕೃತಿಗೆ ಇರುವ ಸಂಬಂಧವನ್ನು ತಿಳಿಸಲು ಸೇರಿಸುವ ಪ್ರತ್ಯಯಕ್ಕೆ **ವಿಭಕ್ತಿ ಪ್ರತ್ಯಯ**ವೆಂದು ಹೆಸರು. (ಮೇಲ್ಕಂಡಂತೆ ಏಳು ವಿಧ ವಿಭಕ್ತಿಗಳೂ, ಉ, ಅನ್ನು, ಇಂದ ಮೊದಲಾದ ಏಳು ವಿಧ ಪ್ರತ್ಯಯಗಳಿರುವುದನ್ನು ತಿಳಿಯಬಹುದು) ಈ ವಿಭಕ್ತಿ ಪ್ರತ್ಯಯಗಳು ನಾಮ ಪ್ರಕೃತಿಗಳ ಮೇಲೆ ಬೇರೆ ಬೇರೆ ಅರ್ಥಗಳಲ್ಲಿ ಸೇರುವುವು. ಇವಕ್ಕೆ **ಕಾರಕಾರ್ಥಗಳೆಂದು** ಹೆಸರು. ಅವುಗಳ ವಿವರ ಈ ರೀತಿ ಇದೆ:

| ವಿಭಕ್ತಿ | ಕಾರಕಾರ್ಥ | ಉದಾಹರಣೆ |
|---|---|---|
| ಪ್ರ | ಕರ್ತೃ | ಮಗುವು ಮಲಗಿತು |
| ದ್ವಿ | ಕರ್ಮ | ಕುರುಬನು ಕುರಿಗಳನ್ನು ಮೇಯಿಸಿದನು |
| ತೃ | ಕರಣ | ಲೇಖಣಿಯಿಂದ ಬರೆ |
| ಚ | ಸಂಪ್ರದಾನ | ಯಾಚಕನಿಗೆ ದಾನಮಾಡು |
| ಪ | ಅಪಾದಾನ | ಚಿರತೆಯ ದೆಸೆಯಿಂದ ಭಯ |
| ಷ | ಸಂಭಂಧ | ನಮ್ಮ ಗುರುಗಳು |
| ಸ | ಅಧಿಕರಣ | ಎಳ್ಳಿನಲ್ಲಿ ಎಣ್ಣೆಯಿದೆ |

## ವಿಭಕ್ತಿ ಪಲ್ಲಟ

ಮೇಲಿನ ನಿಯಮಕ್ಕೆ ಒಳಪಡದೆ ಒಂದು ವಿಭಕ್ತಿಯ ಅರ್ಥದಲ್ಲಿ ಮತ್ತೊಂದನ್ನು ಉಪಯೋಗಿಸುವುದು ವಿಭಕ್ತಿಪಲ್ಲಟವೆನಿಸುವುದು.

| ನಿಜಪಲ್ಲಟ | ವಿಭಕ್ತಿ ಪಲ್ಲಟ |
|---|---|
| ಮಣ್ಣಿನಿಂದ ಮುಚ್ಚಿದನು | ಮಣ್ಣನ್ನು ಮುಚ್ಚಿದನು (ತೃತೀಯೆಗೆ ದ್ವಿತೀಯಾ) |
| ಕೆಲಸಕ್ಕೆ ಪ್ರಯತ್ನ | ಕೆಲಸದ ಪ್ರಯತ್ನ (ಚತುರ್ಥಿಗೆ ಷಷ್ಠೀ) |
| ಇವರನ್ನು ಕೇಳು | ಇವರಲ್ಲಿ ಕೇಳು (ದ್ವಿತೀಯೆಗೆ ಸಪ್ತಮೀ) |

### ಅಭ್ಯಾಸ ೩.

೧ ಈ ಶಬ್ದಗಳು ಯಾವ ಲಿಂಗಗಳಾಗಿವೆ ?
ಗೌರಿ, ಮಾಧವ, ನರಿ, ತಂದೆ, ಕುದುರೆ, ಮಕ್ಕಳು, ದೇವತೆ.

೨ ಮುಂದೆ ಕೊಟ್ಟಿರುವ ಶಬ್ದಗಳ ಬಹುವಚನ ರೂಪಗಳನ್ನು ತಿಳಿಸಿ—
ಮನುಷ್ಯ, ಅಣ್ಣ, ಸೊಸೆ, ಮಗು, ಚಿಕ್ಕಪ್ಪ, ಮನೆ.

೩ ವಿಭಕ್ತಿಗಳಲ್ಲಿ ಎಷ್ಟು ವಿಧಗಳಿವೆ ? ಗುರು ಎಂಬ ಪದದ ಬಹುವಚನ ರೂಪವನ್ನು ಎಲ್ಲ ವಿಭಕ್ತಿಗಳಲ್ಲಿ ನಡೆಯಿಸಿ.

೪ ಅ) ವಿಭಕ್ತಿ ಪಲ್ಲಟವೆಂದರೇನು ?
ಆ) "ಊರಿಗೆ ಸೇರಿದನು" "ಕೆಲಸದ ಪ್ರಯತ್ನ"—ಇಲ್ಲಿ ಪಲ್ಲಟವಾಗಿರುವ ವಿಭಕ್ತಿಗಳಾವುವು ?

೫ ಮುಂದೆ ಗುರುತಿಸಿರುವ ಪದಗಳ ಲಿಂಗ, ವಚನ, ವಿಭಕ್ತಿಗಳನ್ನು ತಿಳಿಸಿ:
ಅ) ಚಿಕ್ಕಮಕ್ಕಳನ್ನು ಕಂಡರೆ ಹಿರಿಯರಿಗೆ ಪ್ರೀತಿ.
ಆ) ಒಂದು ದಿನ ಶಂಕರನು ನದಿಯಲ್ಲಿ ಸ್ನಾನ ಮಾಡಿ ಬರುತ್ತಿದ್ದನು.

---

## ೭. ಸಾಧಿತ ನಾಮಪದ

ನಾಮಪ್ರಕೃತಿಗಳಿಗೂ, ಧಾತುಗಳಿಗೂ ಕೆಲವು ವಿಧ ಪ್ರತ್ಯಯಗಳನ್ನು ಸೇರಿಸುವುದರಿಂದ ಸಾಧಿತ ನಾಮಪದಗಳಾಗುವುವು. ಇವುಗಳು ಮುಂದೆ ತಿಳಿಸಿರುವಂತೆ ಐದು ವಿಧಗಳಾಗಿರುವುವು.

೧) ಕೃದಂತನಾಮ ೨) ಕೃದಂತ ಭಾವನಾಮ ೩) ತದ್ಧಿತಾಂತ ನಾಮ ೪) ತದ್ಧಿತಾಂತ ಭಾವನಾಮ ೫) ಸಮಾಸ.

ಈ ಸಾಧಿತ ನಾಮಪದಗಳು ಪ್ರಕೃತಿಸ್ವರೂಪವಲ್ಲಿಯೇ ಅವಶ್ಯ ಸಂದರ್ಭಗಳಲ್ಲಿ ಲಿಂಗ, ವಚನ ಮತ್ತು ವಿಭಕ್ತಿ ಪ್ರತ್ಯಯಗಳನ್ನೂ ಹೊಂದುತ್ತವೆ.

(೧) **ಕೃದಂತ ನಾಮಗಳು**—ಇವು ಧಾತುಗಳಿಂದ ಹುಟ್ಟಿ ಕ್ರಿಯಾರ್ಥವನ್ನು ಕೊಡುವ ನಾಮಪದಗಳಾಗಿರುವುವು.

ಆಡುವವನು, ತಾಳಿದವನು (ಸೂಚನೆ: ಇಲ್ಲಿ ಆಡು, ತಾಳು ಎಂಬಿವು ಧಾತುಗಳು. ಆದರೆ ವ್ಯಕ್ತಿ ನಿರ್ದೇಶವಾಗುವ ಆಡುವವನು, ತಾಳಿದವನು ಎಂಬ ಪದಗಳು ಸಾಧಿತನಾಮ ಪದಗಳು.)

(೨) **ಕೃದಂತಭಾವನಾಮಗಳು**—ಇವು ಧಾತುಗಳಿಂದ ಹುಟ್ಟಿರುವ ಭಾವನಾಮಗಳಾಗಿರುವುವು. ಉದಾ: ಕುಡಿತ, ಮರೆವು.

ಕುಡಿ ಧಾತುವಿನ ಭಾವ = ಕುಡಿತ ಮರೆ ಧಾತುವಿನ ಭಾವ = ಮರೆವು

(೩) **ತದ್ಧಿತಾಂತ ನಾಮಗಳು**—ಇವು ನಾಮಪ್ರಕೃತಿಗಳಿಂದ ಸಾಧಿತವಾದ ಪದಗಳು ಉದಾ: ಗುಣವಂತ, ಕನ್ನಡಿಗ, ಬಳೆಗಾರ, ಗಾಣಿಗಿತ್ತಿ

(೪) **ತದ್ಧಿತಾಂತಭಾವನಾಮಗಳು**—ಇವು ನಾಮಪ್ರಕೃತಿಗಳಿಂದ ಸಾಧಿತವಾದ ಭಾವನಾಮಗಳು. ಉದಾ: ಬಡತನ, ಜಾಣ್ಮೆ, ಕಪ್ಪು, ಕೆಂಪು

(೫) **ಸಮಾಸ**—ಒಟ್ಟುಗೂಡಿದ ಪದ

ಉದಾ: ಸುರಪತಿ, ಭೀಷ್ಮದ್ರೋಣರು

## ೮. ಸಮಾಸ

ಎರಡು ಅಥವಾ ಅನೇಕ ನಾಮಪದಗಳು ಅರ್ಥಕ್ಕನುಸಾರವಾಗಿ ಸೇರಿ ಒಂದು ಪದವಾಗುವುದಕ್ಕೆ ಸಮಾಸವೆಂದು ಹೆಸರು.

ಉದಾ: ಅರಮನೆ, ಗಿಡಮರಬಳ್ಳಿಗಳು.

ಸಮಾಸದ ಅರ್ಥವನ್ನು ಬಿಡಿಸಿ ಹೇಳುವ ಮಾತುಗಳ ಗುಂಪಿಗೆ **ವಿಗ್ರಹವಾಕ್ಯ** ಎಂದು ಹೆಸರು.

ಅರಸನ + ಮನೆ = ಅರಮನೆ, ಗಿಡವೂ + ಮರವೂ + ಬಳ್ಳಿಯೂ = ಗಿಡಮರಬಳ್ಳಿಗಳೂ.

ಸಮಾಸಪದಗಳಲ್ಲಿ ಮೊದಲನೆಯ ಪದವನ್ನು **ಪೂರ್ವಪದವೆಂದೂ** ಅದರ ಮುಂದಿನ ಪದವನ್ನು **ಉತ್ತರಪದವೆಂದೂ** ಕರೆಯುವುದು. (ಪೂರ್ವಪದ—ಅರಸನ, ಉತ್ತರ ಪದ—ಮನೆ, ಸಮಾಸಪದ—ಅರಮನೆ.

## ೯. ಸಮಾಸ ಭೇದಗಳು

ಸಮಾಸದಲ್ಲಿ ಮುಖ್ಯವಾಗಿ ತತ್ಪುರುಷ, ಕರ್ಮಧಾರಯ, ಅಂಶಿ, ದ್ವಂದ್ವ ಮತ್ತು ಬಹುವ್ರೀಹಿಗಳೆಂಬ ೫ ಭೇದಗಳಿರುವುವು.

| ಭೇದಗಳು | ನಿಯಮ | ಉದಾಹರಣೆ |
|---|---|---|
| ೧) ತತ್ಪುರುಷ— | ಉತ್ತರಪದಾರ್ಥಪ್ರಧಾನ | ಮನೆದೋಟ |
| ೨) ಕರ್ಮಧಾರಯ— | ಉತ್ತರಪದಾರ್ಥಪ್ರಧಾನ ಮತ್ತು ವಿಶೇಷಣ ವಿಶೇಷ್ಯಭಾವ | ಚಿಕ್ಕ ಮಗು |
| ೩.) ಅಂಶಿ | ಪೂರ್ವಪದಾರ್ಥಪ್ರಧಾನ | ಒಳಗೆರೆ |
| ೪) ದ್ವಂದ್ವ | ಉಭಯಪದಾರ್ಥಪ್ರಧಾನ | ವಸಿಷ್ಠವಿಶ್ವಾಮಿತ್ರರು |
| ೫) ಬಹುವ್ರೀಹಿ | ಅನ್ಯಪದಾರ್ಥಪ್ರಧಾನ | ಮುಕ್ಕಣ್ಣ |

ಈ ಸಮಾಸಗಳಲ್ಲಿ ಮತ್ತೆ ಕೆಲವು ಒಳ ಪಂಗಡಗಳಿರುವುವು. ಕನ್ನಡದಲ್ಲಿ ಬಳಕೆಯಲ್ಲಿರುವ ಸಮಾಸಗಳ ಪರಿಚಯಗಳನ್ನು ಮಾತ್ರ ಮುಂದೆ ಮಾಡಿಕೊಡಲಾಗಿದೆ.

## ೧೦ ಸಮಾಸದ ಒಳಭೇದಗಳು

೧. ತತ್ಪುರುಷಸಮಾಸದಲ್ಲಿ ಉತ್ತರಪದದ ಅರ್ಥ ಮುಖ್ಯವಾಗಿರುತ್ತೆ.

**ಸ. ಪದ ವಿಗ್ರಹವಾಕ್ಯ ಪ್ರತ್ಯಯ**

| | | | |
|---|---|---|---|
| ಅ ದ್ವಿತೀಯಾ | ಕೈಮುಗಿ | ಕೈಯನ್ನು ಮುಗಿ | ಅನ್ನು |
| | | ಕೈಯ್ಯಂ ಮುಗಿ | ಅಂ (ಹ. ಕ.) |
| ಆ ಷಷ್ಠಿ | ಮರಗಾಲು | ಮರದ ಕಾಲು | ಅ |
| ಇ ಸಪ್ತಮಿ | ಹರಟೆಮಲ್ಲ | ಹರಟೆಯಲ್ಲಿ ಮಲ್ಲ | ಅಲ್ಲಿ |

ದ್ವಿತೀಯಾ ತತ್ಪುರುಷದಲ್ಲಿ ಸಾಧಾರಣವಾಗಿ ಉತ್ತರ ಪದವು ಕ್ರಿಯಾಪದವಾಗಿರುವುದು. ಆದುದರಿಂದ ಇದು **ಕ್ರಿಯಾಸಮಾಸ** ವಾಗುವುದು. ಮೇಲ್ಕಂಡ ಮೂರು ತತ್ಪುರುಷಗಳೂ ಕನ್ನಡದಲ್ಲಿ ಹೆಚ್ಚು ಬಳಕೆಯಲ್ಲಿವೆ. ಸಂಸ್ಕೃತದಲ್ಲಿ ಪ್ರಥಮಾ ವಿಭಕ್ತಿಯನ್ನು ಬಿಟ್ಟುಳಿದ ವಿಭಕ್ತಿಗಳಲ್ಲೆಲ್ಲಾ ತತ್ಪುರುಷಗಳಿವೆ.

೨. **ಕರ್ಮಧಾರಯ ಸಮಾಸ**ದಲ್ಲಿ ಉತ್ತರಪದದ ಅರ್ಥ ಮುಖ್ಯವಾಗಿದ್ದು ವಿಶೇಷಣ ವಿಶೇಷ್ಯಗಳಿಂದ ಕೂಡಿರುವುದು.

| ಒಳಭೇದ (ಸಂಕೇತ ಶಬ್ದ) | ಸಮಾಸಪದ | ವಿಗ್ರಹವಾಕ್ಯ | ವಿ.ಸೂ.ಪ್ರತ್ಯಯ |
|---|---|---|---|
| ೧) ವಿಶೇಷಣ ಪೂರ್ವಪದ [ವಿ.ಪೂ.ಕ.] | ಹೊಸಗನ್ನಡ | ಹೊಸದಾದ ಕನ್ನಡ | ಆದ |
| ೨) ವಿಶೇಷಣ ಉತ್ತರಪದ [ವಿ.ಉ.ಕ.] | ರಾವಣಸಿಂಹ | ರಾವಣನು ಸಿಂಹನಾದ | ಆದ |
| ೩) ವಿಶೇಷಣ ಉಭಯಪದ [ವಿ.ಉಭ.ಕ.] | ಸುಖೋಷ್ಣ | ಸುಖವೂ ಉಷ್ಣವೂ ಆದ | ಆದ |
| ೪) ಉಪಮಾನ ಪೂರ್ವಪದ [ಉ.ಪೂ.ಕ.] | ತಾವರೆಗಣ್ | ತಾವರೆಯಂತೆ ಕಣ್ | ಅಂತೆ |
| ೫) ಉಪಮಾನ ಉತ್ತರಪದ [ಉ.ಉ.ಕ.] | ಅಡಿದಾವರೆ | ಅಡಿಯು ತಾವರೆಯಂತೆ | ಅಂತೆ |
| ೬) ಸಂಭಾವನ ಪೂರ್ವಪದ [ಸಂ.ಪೂ.ಕ] | ದಿಲೀಪರಾಜ | ದಿಲೀಪನೆಂಬ ರಾಜ | ಎಂಬ |
| ೭) ಅವಧಾರಣ ಪೂರ್ವಪದ [ಅ.ಪೂ.ಕ.] | ವಿದ್ಯಾಧನ | ವಿದ್ಯೆಯೇ ಧನ | ಏ |
| ೮) ಲುಪ್ತ ಮಧ್ಯಮಪದ [ಲು.ಮ.ಕ.] | ದಧ್ಯನ್ನ | ದಧಿ ಮಿಶ್ರಿತ ಅನ್ನ | ಮಿಶ್ರಿತ |
| ೯) ನಞ್ ಸಮಾಸ [ನ.ಸ.] | ಅಶುದ್ಧ | ನ ಶುದ್ಧ | ನ |
| ೧೦) ೧ ದ್ವಿಗು ಸಮಾಸ [ದ್ವಿ.ಸ.] | ನಾಲ್ಕಾನೆಗಳು | ನಾಲ್ಕಾದ ಆನೆಗಳು | ಆದ |
| ೧೧) ೨ ಗಮಕ ಸಮಾಸ [ಗ.ಸ.] | ಆ ಕಪಿ | ಅದು ಕಪಿ | ಸರ್ವನಾಮ |
| | ಓದುವ ಪುಸ್ತಕ | ಓದುವುದು ಪುಸ್ತಕ | ಕೃದಂತ |

---

೧ ಸಂಖ್ಯಾ ಪೂರ್ವಪದವಾಗಿದ್ದರೆ ದ್ವಿಗುಸಮಾಸ.

೨ ಕೃದಂತ ಅಥವಾ ಸರ್ವನಾಮವಾಗಿದ್ದರೆ ಗಮಕಸಮಾಸ.

**೩. ಅಂಶಿ ಅಥವಾ ಅವ್ಯಯೀಭಾವ ಸಮಾಸ**ದಲ್ಲಿ ಪೂರ್ವಪದದ ಅರ್ಥ ಮುಖ್ಯವಾಗಿರುವುದು.

ಉದಾ: ಕೈಯ್ಯ + ಅಡಿ= ಅಂಗೈ ;  ಕೆರೆಯ + ಒಳಗು= ಒಳಗೆರೆ

(ಸೂ. ವಿಗ್ರಹವಾಕ್ಯದ ಪದಗಳು ಈ ಸಮಾಸದಲ್ಲಿ ಹಿಂದು ಮುಂದು ಆಗುವುವು. ಅಂಶಿ ಸಮಾಸದಲ್ಲಿ ಅವ್ಯಯ ಪದಗಳು ಸೇರಿರುವುದರಿಂದ ಇದಕ್ಕೆ ಅವ್ಯಯೀ ಭಾವವೆಂದು ಹೆಸರು)

ಉದಾ: ಒಳಗು ಅವ್ಯಯ ಪದ

**೪. ದ್ವಂದ್ವ ಸಮಾಸ**ದಲ್ಲಿ ಪೂರ್ವೋತ್ತರಪದಗಳೆರಡರ ಅರ್ಥ ಮುಖ್ಯವಾಗಿರುವುದು.

| **ಒಳಭೇದ** | **ಸಂದರ್ಭ** | **ಸಮಾಸ** |
|---|---|---|
| ಅ) ಇತರೇತರ ಯೋಗ | (ಬಹುವಚನಾಂತವಾಗಿರುವುದು) | ಸೋಮಭೀಮರು |
| ವಿಗ್ರಹವಾಕ್ಯ :—ಸೋಮನೂ ಭೀಮನೂ = ಸೋಮಭೀಮರು | | |
| ಆ) ಸಮಾಹಾರ— | (ಏಕವಚನಾಂತವಾಗಿರುವುದು)— | ಹಣ್ಣುಕಾಯಿ |
| ವಿಗ್ರಹವಾಕ್ಯ:—ಹಣ್ಣು, ಕಾಯಿ ಇವುಗಳ ಒಟ್ಟು (ಸಮಾಹಾರ) = ಹಣ್ಣುಕಾಯಿ | | |
| ಇ) ಏಕಶೇಷೀ ಭಾವ | (ಒಂದೇ ಪದವಾಗಿರುವುದು) | ಜಾಣರು |
| ವಿಗ್ರಹವಾಕ್ಯ :—ಜಾಣೆಯೂ, ಜಾಣನೂ = ಜಾಣರು | | |

**೫. ಬಹುವ್ರೀಹಿ ಸಮಾಸ**ದಲ್ಲಿ ಬೇರೊಂದು ಪದದ ಅರ್ಥ ಮುಖ್ಯವಾಗಿರುವುದು.

| **ಒಳಭೇದ** | **ಸಂದರ್ಭ** | **ವಿಗ್ರಹವಾಕ್ಯ** | **ಸಮಾಸ** |
|---|---|---|---|
| ಅ) ಸಮಾನಾಧಿಕರಣ | ಸಮಾನ ವಿಭಕ್ತ್ಯಂತ | ಮೂರಾದ ಕಣ್ಣು ಯಾವನಿಗುಂಟೋ ಅವನು | ಮುಕ್ಕಣ್ಣ |
| ಆ) ವ್ಯಧಿಕರಣ | ಭಿನ್ನ ವಿಭಕ್ತ್ಯಂತ | ಹಣೆಯಲ್ಲಿ ಕಣ್ಣು ಯಾರಿಗುಂಟೋ ಅವನು | ಹಣೆಗಣ್ಣ |
| ಇ) ಸಂಖ್ಯೋಭಯಪದ | ಸಂಖ್ಯಾಪದ ಸಹಿತ | ಏಳೋ ಎಂಟೋ | ಏಳೆಂಟು |
| ಈ) ವ್ಯತೀಹಾರ ಲಕ್ಷಣ | ಜಗಳ ತೋರುವುದು | ಕೋಲಿನಿಂದ ಹೊಡೆದಾಡುವುದು ಯಾವ ಜಗಳದಲ್ಲೋ ಅದು | ಕೋಲಾಕೋಲಿ |
| ಉ) ಸಹಪೂರ್ವಪದ | ಒಡನೆ ಎಂಬರ್ಥ ತೋರುವುದು | ಸಹ ಮಿತ್ರ | ಸಮಿತ್ರ |

**ವಿಶೇಷ ವಿಷಯ**—ಕನ್ನಡ ಸಂಸ್ಕೃತ ಶಬ್ದಗಳನ್ನು ಸೇರಿಸಿ **ಅರಿಸಮಾಸ**ವನ್ನು ಮಾಡಬಾರದು. ಆದರೆ ಪೂರ್ವಕವಿ ಪ್ರಯೋಗದಲ್ಲಿಯೂ, ಕ್ರಿಯಾ

ಸಮಾಸದಲ್ಲಿಯೂ, ಅರಿಸಮಾಸವು ಕಂಡು ಬರುವುದು. ಉದಾ: ಮಂಗಳಾರತಿ ರಾಯಕೋಲಾಹಲಂ, ಪ್ರಣಾಮಂಗೈದು.

ಸೂಚನೆ. ಮಂಗಳ (ಸಂಸ್ಕೃತ ಪದ) ಆರತಿ (ಕನ್ನಡ ಪದ)

**ಅಭ್ಯಾಸ ೪.**

೧ ಸಾಧಿತ ನಾಮಪದವೆಂದರೇನು ? ಇದರಲ್ಲೆಷ್ಟು ವಿಧವುಂಟು ? ಉದಹರಿಸಿ

೨ ಸಮಾಸವೆಂದರೇನು ? ಇದರ ಮುಖ್ಯ ಭೇದಗಳಾವುವು ? ಉದಹರಿಸಿ.

೩ ಈ ಪದಗಳ ವಿಗ್ರಹವಾಕ್ಯಗಳನ್ನು ಬರೆದು ಸಮಾಸದ ಹೆಸರನ್ನು ತಿಳಿಸಿ.
ಭೀಮಾರ್ಜುನರು, ಲಂಕಾಪುರಿ, ನೀಚರಾಕ್ಷಸ, ಮುಂಗಾರು, ಕಮಲಾಕ್ಷನು, ಮುಖಕಮಲ, ಕೈಗೂಡು, ಕಾರಿರುಳು, ಇಕ್ಕಡೆ, ಈಮರ.

೪ ಅ) ಅರಿಸಮಾಸವೆಂದರೇನು ? ಆ) ಬಹುವ್ರೀಹಿ ಸಮಾಸದ ಒಳಭೇದಗಳಾವುವು ?

೫ ಇವುಗಳಿಗೆ ಒಂದೊಂದು ಮಾತನ್ನು ಬರೆಯಿರಿ.
ಬೆಳ್ಳಿಯಿಂದ ಮಾಡುವ ಕೆಲಸ, ಮದುರೆಯೆಂಬ ನಗರ, ಓರೆಯಾದ ಕಣ್ಣುಳ್ಳವನು, ಆನೆಗಳೂ ಸಿಂಹಗಳೂ.

---

# ೧೧. ಕ್ರಿಯಾಪದ

ಧಾತುಗಳಿಗೆ ಆಖ್ಯಾತ ಪ್ರತ್ಯಯಗಳನ್ನು ಸೇರಿಸಿದರೆ **ಕ್ರಿಯಾಪದ**ಗಳಾಗುವುವು. **ಧಾತು** ಕ್ರಿಯೆಯನ್ನು ತಿಳಿಸುವ ಪ್ರಕೃತಿ. **ಕ್ರಿಯಾಪದವು** ಕರ್ತೃವಿನ ಕೆಲಸವನ್ನು ತಿಳಿಸುತ್ತದೆ. ಆದುದರಿಂದ ಇದು ಕರ್ತೃವಿನ ಲಿಂಗ, ವಚನಗಳನ್ನನುಸರಿಸಿಯೂ, ಕಾಲ ಮತ್ತು ಅರ್ಥಗಳಿಗೆ ತಕ್ಕಂತೆಯೂ ರೂಪಭೇದವನ್ನು ಹೊಂದುತ್ತದೆ. ಹೀಗೆ ರೂಪಭೇದವನ್ನು ಹೊಂದುವಾಗ ಕಾಲಸೂಚಕ ಪ್ರತ್ಯಯಗಳನ್ನು ಹೊಂದುತ್ತದೆ. ಈ ಕಾಲಸೂಚಕ

ಪ್ರತ್ಯಯಗಳನ್ನು **ವಿಕರಣ ಪ್ರತ್ಯಯ**ಗಳೆಂದು ಕರೆಯುವರು. ಉದಾ:—

**ಧಾತು:** ನಡೆ, ಓದು, ಕೆಡು, ಚಲಿಸು. **ಕ್ರಿಯಾಪದ:** ನಡೆಯುತ್ತಾನೆ. ನಡೆದನು, ನಡೆವನು (ವಿವರಣೆ: ನಡೆ–ಧಾತು, ಉತ್ತ–ವಿ.ಪ್ರತ್ಯಯ, ಆನೆ–ಆಖ್ಯಾತ ಪ್ರತ್ಯಯ.

## ೧೨. ಕಾಲ

ಕಾಲವು ಕ್ರಿಯೆ ನಡೆಯುವ ವೇಳೆಯನ್ನು ತಿಳಿಸುವುದು. ಇವರಲ್ಲಿ ವರ್ತಮಾನ, ಭೂತ ಮತ್ತು ಭವಿಷ್ಯತ್ಕಾಲಗಳೆಂದು ಮೂರು ವಿಧಗಳುಂಟು. ಈ ಮೂರು ಕಾಲಗಳಲ್ಲೂ ಕ್ರಮವಾಗಿ ಧಾತು ಮತ್ತು ಆಖ್ಯಾತ ಪ್ರತ್ಯಯಗಳ ನಡುವೆ **ಉತ್ತ, ದ, ವ**–ಎಂಬ ವಿಕರಣ ಪ್ರತ್ಯಯಗಳು ಕ್ರಮವಾಗಿ ಬರುವುವು ಉದಾ:—

| | | |
|---|---|---|
| ೧) **ವರ್ತಮಾನ ಕಾಲ** | (ಈಗ ನಡೆಯುತ್ತಿರುವುದು) | ನೋಡುತ್ತಾನೆ: |
| ೨) **ಭೂತಕಾಲ** | (ಕಳೆದುಹೋದುದು) | ನೋಡಿದನು |
| ೩) **ಭವಿಷ್ಯತ್ ಕಾಲ** | (ಮುಂದೆ ಬರುವುದು) | ನೋಡುವನು |

| **ವಿವರಣೆ** | | **ಧಾತು** | | **ವಿಕರಣ ಪ್ರತ್ಯಯ** | | **ಆಖ್ಯಾತ ಪ್ರತ್ಯಯ** |
|---|---|---|---|---|---|---|
| ನೋಡುತ್ತಾನೆ | = | ನೋಡು | + | ಉತ್ತ | + | ಆನೆ |
| ನೋಡಿದನು | = | ನೋಡು | + | ದ | + | ಅನು |
| ನೋಡುವನು | = | ನೋಡು | + | ವ | + | ಅನು |

## ೧೩. ಅರ್ಥ

ಅರ್ಥವು ಕರ್ತೃವಿನ ಅಭಿಪ್ರಾಯವನ್ನು ತಿಳಿಸುತ್ತದೆ. ಇದು ವಿಧಿ, ನಿಷೇಧ, ಮತ್ತು ಸಂಭಾವನ—ಎಂದು ಮೂರು ವಿಧವಾಗಿದೆ.

೧) **ವಿಧ್ಯರ್ಥ**—(ನಿಯಮ, ಆಜ್ಞೆ' ಪ್ರಾರ್ಥನೆ ಮತ್ತು ಆಶೀರರ್ಥಗಳನ್ನು ತಿಳಿಸುವುವು.)

ಉದಾ: ಕೊಡು, ಕೊಡಲಿ.

೨) **ನಿಷೇಧಾರ್ಥ**—(ಕ್ರಿಯೆಯು ನಡೆಯಲಿಲ್ಲವೆಂಬ ಅರ್ಥ ತೋರು ವುದು. ಉದಾ: ಬಾರನು, ಕೊಡಲಾರನು.

೩) **ಸಂಭಾವನಾರ್ಥ**—(ಸಂದೇಹ ತೋರುವುದು)
ಉದಾ: ಬಂದಾರು, ಕೊಟ್ಟಾನು.

## ೧೪. ಕ್ರಿಯಾರೂಪಗಳು

ಯಾವುದೊಂದು ಕ್ರಿಯೆಯನ್ನೂ ಮೇಲಿನ ಆರು ವಿಧ ರೂಪಗಳಲ್ಲಿ (ಎಂದರೆ ಮೂರು ಕಾಲ ಮತ್ತು ಮೂರು ಅರ್ಥಗಳು ಸೇರಿ ಆರು ರೂಪ ಗಳು) ನಡೆಸಬೇಕಾದಾಗಲೂ, ಎಲ್ಲ ಪುರುಷ, ಲಿಂಗ, ವಚನಗಳಲ್ಲಿಯೂ ಆಯಾ ರೂಪಗಳನ್ನು ಈ ಕೆಳಗೆ ಕಂಡಂತೆ ಪಟ್ಟಿಯ ಕ್ರಮದಲ್ಲಿ ತಿಳಿಯಬೇಕು.

**೧. ವರ್ತಮಾನ ಕಾಲ** **ವಚನ**

| ಪುರುಷ | ಲಿಂಗ | ಏಕ | ಬಹು |
|---|---|---|---|
| ಪ್ರಥಮಾ | ಪು. | ನೋಡುತ್ತಾನೆ | ನೋಡುತ್ತಾರೆ |
| | ಸ್ತ್ರೀ. | ನೋಡುತ್ತಾಳೆ | ನೋಡುತ್ತಾರೆ |
| | ನ. | ನೋಡುತ್ತದೆ | ನೋಡುತ್ತವೆ |
| ಮಧ್ಯಮ | | ನೋಡುತ್ತೀಯೆ | ನೋಡುತ್ತೀರಿ |
| ಉತ್ತಮ | | ನೋಡುತ್ತೇನೆ | ನೋಡುತ್ತೇವೆ |

**೨. ಭೂತಕಾಲ**

| | | | |
|---|---|---|---|
| ಪ್ರಥಮ | ಪು. | ನೋಡಿದನು | ನೋಡಿದರು |
| | ಸ್ತ್ರೀ. | ನೋಡಿದಳು | ನೋಡಿದರು |
| | ನ. | ನೋಡಿತು | ನೋಡಿದವು |
| ಮಧ್ಯಮ | | ನೋಡಿದೆ | ನೋಡಿದಿರಿ |
| ಉತ್ತಮ | | ನೋಡಿದೆನು | ನೋಡಿದೆವು |

೩. ಭವಿಷ್ಯತ್ ಕಾಲ

| | | | |
|---|---|---|---|
| ಪ್ರಥಮ | ಪು. | ನೋಡುವನು | ನೋಡುವರು |
| | ಸ್ತ್ರೀ. | ನೋಡುವಳು | ನೋಡುವರು |
| | ನ. | ನೋಡುವುದು | ನೋಡುವುವು |
| ಮಧ್ಯಮ | | ನೋಡುವಿ | ನೋಡುವಿರಿ |
| ಉತ್ತಮ | | ನೋಡುವೆನು | ನೋಡುವೆವು |

೪. ವಿಧ್ಯರ್ಥ

| | | | |
|---|---|---|---|
| ಪ್ರಥಮ | ಪು. | ನೋಡಲಿ | ನೋಡಲಿ |
| | ಸ್ತ್ರೀ | ,, | ,, |
| | ನ. | ,, | ,, |
| ಮಧ್ಯಮ | | ನೋಡು | ನೋಡಿರಿ |
| ಉತ್ತಮ | | ನೋಡುವ | ನೋಡೋಣ |

೫. ನಿಷೇಧಾರ್ಥ

| | | | |
|---|---|---|---|
| ಪ್ರಥಮ | ಪು. | ನೋಡಲಾರೆನು | ನೋಡಲಾರರು |
| | ಸ್ತ್ರೀ. | ನೋಡಲಾರಳು | ,, |
| | ನ. | ನೋಡಲಾರದು | ನೋಡಲಾರವು |
| ಮಧ್ಯಮ | | ನೋಡಲಾರೆ | ನೋಡಲಾರಿರಿ |
| ಉತ್ತಮ | | ನೋಡಲಾರೆನು | ನೋಡಲಾರೆವು |

೬. ಸಂಭಾವನಾರ್ಥ

| | | | |
|---|---|---|---|
| ಪ್ರಥಮ | ಪು. | ನೋಡಾನು | ನೋಡಾರು |
| | ಸ್ತ್ರೀ. | ನೋಡಾಳು | ,, |
| | ನ. | ನೋಡೀತು | ನೋಡಾವು |
| ಮಧ್ಯಮ | | ನೋಡೀಯೆ | ನೋಡೀರಿ |
| ಉತ್ತಮ | | ನೋಡೇನು | ನೋಡೇವು |

[ವಿ.ಸೂ.—ಈ ಆರು ರೂಪಗಳಲ್ಲಿರುವ ಕ್ರಿಯಾಪದಗಳೂ ಪೂರ್ಣಾರ್ಥವನ್ನು ಕೊಡುವುದರಿಂದ ಇವಕ್ಕೆ ಪೂರ್ಣಕ್ರಿಯಾಪದಗಳೆಂದು ಹೆಸರು]

## ೧೫. ಕ್ರಿಯಾ ಪ್ರಯೋಗ

ಧಾತುಗಳಲ್ಲಿ ಹಲವು **ಸಕರ್ಮಕಗಳು** (ಎಂದರೆ ಕರ್ಮಪದವನ್ನು ಹೊಂದತಕ್ಕವು.) ಮತ್ತೆ ಕೆಲವು **ಅಕರ್ಮಕಗಳು** (ಎಂದರೆ ಕರ್ಮಪದವನ್ನು ಹೊಂದದಿರುವುವು.) ಅಕರ್ಮಕ ಧಾತುಗಳು ಪ್ರೇರಣಾರ್ಥದಲ್ಲಿ "ಇಸು" ಪ್ರತ್ಯಯವನ್ನು ಹೊಂದಿ, ಸಕರ್ಮಕಗಳಾಗುವುವು.

ಉದಾ: ಸಕರ್ಮಕಕ್ಕೆ—ತಿನ್ನು, ಕೊಡು. ಮಾಡು.
ಅಕರ್ಮಕಕ್ಕೆ—ಮಲಗು, ನಡೆ, ನಿಲ್ಲು.
ಪ್ರೇರಣಾರ್ಥಕ್ಕೆ—ಮಲಗಿಸು, ನಡೆಯಿಸು, ನಿಲ್ಲಿಸು.

ಕ್ರಿಯಾಪದಗಳಲ್ಲಿ **ಕರ್ತರಿ** ಮತ್ತು **ಕರ್ಮಣಿ** ಪ್ರಯೋಗಗಳೆಂಬುದಾಗಿ ಎರಡು ವಿಧವಾದ ಪ್ರಯೋಗಗಳಿವೆ. ಕರ್ಮಣಿ ಪ್ರಯೋಗದಲ್ಲಿ ಧಾತುಗಳಮತ್ತು ವಿಕರಣ ಪ್ರತ್ಯಯಗಳ ನಡುವೆ "ಅಲ್ಪಡು" ಎಂಬ ಪ್ರತ್ಯಯ ಸೇರುವುದು. ಸಕರ್ಮಕ ಧಾತುಗಳಿಗೆ ಎರಡು ವಿಧ ಪ್ರಯೋಗಗಳುಂಟು.

| **ಪ್ರಯೋಗಗಳು** | | **ಉದಾ** |
|---|---|---|
| **ಕತೃರ್ಥಕ್ಕೆ**— | ೧) | ಹಕ್ಕಿಯು ಹಣ್ಣನ್ನು ತಿನ್ನುತ್ತದೆ. |
| | ೨) | ರಂಗನು ಪಾಠವನ್ನು ಓದಿದನು. |
| **ಕರ್ಮಾರ್ಥಕ್ಕೆ**— | ೧) | ಹಕ್ಕಿಯಿಂದ ಹಣ್ಣು ತಿನ್ನಲ್ಪಡುತ್ತದೆ. |
| | ೨) | ರಂಗನಿಂದ ಪಾಠವು ಓದಲ್ಪಟ್ಟಿತು. |

## ೧೬. ಸಾಪೇಕ್ಷ ಕ್ರಿಯಾರೂಪಗಳು

ಅರ್ಥ ಪೂರ್ತಿಯಾಗುವುದಕ್ಕೆ ಇತರ ಕ್ರಿಯಾ ಪದಗಳ ಸಹಾಯವನ್ನು ಬಯಸುವ ಕ್ರಿಯಾ ರೂಪಗಳು ಸಾಪೇಕ್ಷ ಕ್ರಿಯಾರೂಪಗಳು. ಇವುಗಳು ಆರು ತೆರನಾಗಿ ಇರುವುವು

೧. ವರ್ತಮಾನನ್ಯೂನ--**ಮಾತನಾಡುತ್ತಾ** ಹೋಗೋಣ.
೨. ಭೂತನ್ಯೂನ—ನಿನ್ನನ್ನು **ನೋಡಿ** ಸಂತೋಷವಾಯಿತು.
೩. ನಿಷೇಧನ್ಯೂನ—ಈ ಕೆಲಸ **ಮಾಡದೆ** ಮುಂದೆ ಹೋಗಬೇಡ.
೪. ಪಕ್ಷಾರ್ಥ—ಸಂತೆಗೆ **ಹೋದರೆ** ಕಬ್ಬು ತರುವೆನು.
೫. ಭಾವಾರ್ಥ—ಅವನು ನನ್ನನ್ನು **ತಡೆಯಲು** ನಾನು ನಿಂತುಬಿಟ್ಟೆನು.
೬. ಭಿನ್ನಕರ್ತೃಕ--ಮಳೆ **ಬರಲು** ಹೊಳೆ ಹೆಚ್ಚಿತು. (ಈ ವಾಕ್ಯದಲ್ಲಿ ಮಳೆ ಹೊಳೆ ಭಿನ್ನಕರ್ತೃಕಗಳು.)

## ೧೭. ಸಂಯುಕ್ತ ಕ್ರಿಯಾಪದಗಳು

ಎರಡು ಅಥವಾ ಅನೇಕ ಕ್ರಿಯಾರೂಪಗಳು ಒಟ್ಟು ಸೇರಿ ಆಗುವ ಕ್ರಿಯಾಪದಕ್ಕೆ **ಸಂಯುಕ್ತ ಕ್ರಿಯಾಪದ**ವೆಂದು ಹೆಸರು. ಇವು ಸಾಧಾರಣ ವಾಗಿ ಇರು, ಬೇಕು ಎಂಬೀತೆರನಾದ ಸಹಾಯಕ ಕ್ರಿಯೆಗಳು ಸೇರಿ ಆಗುವ ರೂಪಗಳಾಗಿವೆ. ಇವುಗಳನ್ನು ಕೆಳಗೆ ಕಂಡಂತೆ ಐದು ವಿಧಗಳಾಗಿ ವಿಂಗಡಿಸಬಹುದು.

**೧. ವರ್ತಮಾನಕಾಲ**

ಅ) ಅಪೂರ್ಣರೂಪ—ಬರುತ್ತಿದ್ದಾನೆ.
ಆ) ಪೂರ್ಣರೂಪ—ಬಂದಿದ್ದಾನೆ. (ಸಹಾಯಕ ಕ್ರಿಯೆ–ಇದ್ದಾನೆ.)

**೨. ಭೂತಕಾಲ**

ಅ) ಅಪೂರ್ಣ—ನೋಡುತ್ತಿದ್ದನು.
ಆ) ಪೂರ್ಣ—ನೋಡಿದ್ದನು (ಸ. ಕ್ರಿ. ಇದ್ದನು)

**೩. ವಿಧ್ಯರ್ಥ**

ಮಾಡಕೂಡದು, ಮಾಡಬಾರದು, ಹೋಗಬೇಡ, ಬರಬೇಕು. (ಸ.ಕ್ರಿ–ಕೂಡದು, ಬಾರದು, ಬೇಡ, ಬೇಕು)

೪. **ನಿಷೇಧಾರ್ಥ**

ಕರೆಯಲಿಲ್ಲ, ಹೋಗಲಿಲ್ಲ. (ಸ. ಕ್ರಿಯೆ-ಇಲ್ಲ)

೫. **ಸಂಭಾವನಾರ್ಥ**

ಕೇಳಿರಬಹುದು, ಕೊಳ್ಳಬಹುದು. (ಸ. ಕ್ರಿಯೆ-ಬಹುದು)

## ಅಭ್ಯಾಸ ೫.

೧. ಕರೆ. ನಗು, ತಿನ್ನಿಸು, ಅಳುತ್ತಾನೆ, ನಗುವೆನು, ಈ ಜಾಣ, ಹೋಗು ಇವು ಯಾವ ಬಗೆಯ ಪದಗಳು ?

೨. ಧಾತು, ಕ್ರಿಯಾಪದವೆಂದರೇನು ?

೩. ಕ್ರಿಯಾಪದದ ರೂಪಭೇದಗಳೆಷ್ಟು ? 'ಕಲಿ' ಧಾತುವಿನ ಎಲ್ಲ ರೂಪಗಳನ್ನೂ ಹೇಳಿ.

೪. ಇವುಗಳಿಗೆ ಒಂದೊಂದು ಉದಾಹರಣೆ ಕೊಡಿ:—

ಅಕರ್ಮಕ ಧಾತು, ಸಂಭಾವನಾರ್ಥ, ಭೂತಕಾಲ, ಸಂಯುಕ್ತ ಕ್ರಿಯಾಪದ.

೫. ಸಾಪೇಕ್ಷಕ್ರಿಯಾಪದವೆಂದರೇನು ? ಎಷ್ಟು ತೆರನಾಗಿದೆ ? ಉದಾಹರಣೆ ಕೊಡಿ.

೬. ಕಾಲಸೂಚಕ ಪ್ರತ್ಯಯಗಳಾವುವು ? ಆಖ್ಯಾತ ಪ್ರತ್ಯಯವು ಯಾವ ಶಬ್ದದ ಮುಂದೆ ಸೇರುತ್ತದೆ ?

೭. 'ಆಳಿನಿಂದ ಹಾಲು ಕರೆಯಲ್ಪಟ್ಟಿತು' — ಇಲ್ಲಿ ಕ್ರಿಯೆಯು ಯಾವುದು ? ಯಾವ ಅರ್ಥದಲ್ಲಿ ಬಂದಿದೆ. ಬೇರೊಂದರ್ಥದಲ್ಲಿ ಪ್ರಯೋಗಿಸಿ.

———

## ೧೮. ಕೃದಂತ ಮತ್ತು ತದ್ಧಿತಾಂತ

ಧಾತುವಿಗೆ **ಕೃತ್** ಪ್ರತ್ಯಯವು ಸೇರಿದರೆ **ಕೃದಂತ**ವಾಗುವುದು. ನಾಮಪ್ರಕೃತಿಗೆ ತದ್ಧಿತಪ್ರತ್ಯಯವು ಸೇರಿದರೆ **ತದ್ಧಿತಾಂತ**ವಾಗುವುದು. ಇವೆರಡರಲ್ಲೂ ಮೂರು ವಿಧಗಳಿರುವುವು:—

### ಭೇದಗಳು

| ಕೃದಂತ | ತದ್ಧಿತಾಂತ |
|---|---|
| ೧ ಕೃದಂತನಾಮ | ೧ ತದ್ಧಿತಾಂತ ನಾಮ |
| ೨ ಕೃದಂತಭಾವನಾಮ | ೨ ತದ್ಧಿತಾಂತಭಾವನಾಮ |
| ೩ ಕೃದಂತಾವ್ಯಯ | ೩ ತದ್ಧಿತಾಂತಾವ್ಯಯ |

ಹಿಂದೆಯೇ ತಿಳಿಸಿದಂತೆ ಕೃದಂತ ಮತ್ತು ತದ್ಧಿತಾಂತ ನಾಮಪದಗಳೂ ಮತ್ತು ಭಾವನಾಮಗಳೂ **ಸಾಧಿತನಾಮ**ಗಳೆಂಬುದನ್ನು ಮರೆಯಬಾರದು. ಕೃದಂತ ಮತ್ತು ತದ್ಧಿತಾಂತ ಅವ್ಯಯಗಳು, ಅವ್ಯಯಗಳ ಗುಂಪಿಗೆ ಸೇರತಕ್ಕವು.

### ಕೃದಂತ ಭೇದಗಳು

೧. **ಕೃದಂತನಾಮಗಳು**:—ಧಾತುಗಳ ಮೇಲೆ **ಕೃತ್ಪ್ರತ್ಯಯ**ಗಳು ಸೇರಿದರೆ **ಕೃದಂತನಾಮ** (ಅಥವಾ ಕೃನ್ನಾಮ) ಗಳಾಗುತ್ತವೆ. ಉದಾ:
ಮಾಡುವವನು, ನೋಡುವವನು, ಕುರುಕ, ತಿರುಕ.

ಸೂ:—ಇಲ್ಲಿ ಧಾತುಗಳು: ಮಾಡು, ನೋಡು, ಕುರಿ, ತಿರಿ—ಎಂಬಿವು
ಪ್ರತ್ಯಯಗಳು—ಅನು, ಅರು, ಉಕ—ಎಂಬಿವು

೨. ಧಾತುಗಳ ಮೇಲೆ ಭಾವಾರ್ಥದಲ್ಲಿ ಕೃತ್ಪ್ರತ್ಯಯವನ್ನು ಸೇರಿಸಿದರೆ **ಕೃದಂತಭಾವನಾಮ** (ಅಥವಾ ಭಾವಕೃದಂತ) ಗಳಾಗುವುವು. ಉದಾ:—
ಆಡುವುದು, ಆಡುವಿಕೆ, ಆಟ, (ಉದು, ಇಕೆ, ಅ.)

೩. ಕೃತ್ಪ್ರತ್ಯಯಾಂತವಾದ ಅವ್ಯಯಗಳಿಗೆ **ಕೃದಂತಾವ್ಯಯ** (ಅವ್ಯಯ ಕೃದಂತ) ಗಳೆಂದು ಹೆಸರು. ಇದು ವಾಕ್ಯಗಳಲ್ಲಿ ಅಪೂರ್ಣ ಕ್ರಿಯೆಯಾಗಿ ಬರುವುದು. ಉದಾ:—ಹೋಗುತ್ತಾ, ಹೋಗಿ, ಹೋದರೆ, ಹೋಗಲು, ಹೋಗದೆ. (ಸೂ: 'ಹೋಗು' ಎಂಬ ಧಾತುವಿನ ರೂಪಗಳು)

## ತದ್ಧಿತಾಂತ ಭೇದಗಳು

೧. ನಾಮಪ್ರಕೃತಿಗಳಿಗೆ ಬೇರೆ ಬೇರೆ ಅರ್ಥಗಳಲ್ಲಿ ತದ್ಧಿತಪ್ರತ್ಯಯಗಳು ಸೇರಿ **ತದ್ಧಿತಾಂತನಾಮ**ಗಳಾಗುತ್ತವೆ. ಉದಾ:— ಕನ್ನಡಿಗ, ಗುಣವಂತ, ಮಡಿವಾಳ, ಓಲೆಕಾರ,

೨. ನಾಮಪ್ರಕೃತಿಗಳಿಗೆ (ಇದರಲ್ಲಿ ಹೆಚ್ಚಾಗಿ ವಸ್ತುವಾಚಕ ಮತ್ತು ಗುಣವಾಚಕಗಳಿಗೆ) ಭಾವಾರ್ಥದಲ್ಲಿ ತದ್ಧಿತ ಪ್ರತ್ಯಯಗಳು ಸೇರಿದರೆ **ತದ್ಧಿತಾಂತ ಭಾವನಾಮ**ಗಳಾಗುತ್ತವೆ.

ಉದಾ:—ಜಾಣತನ, ಗೌಡಿಕೆ, ಕಿವುಡು ಜಾಣ್ಮೆ,
(ಪ್ರತ್ಯಯಗಳು:—ತನ–ಇಕೆ–ಉ–ಮೆ)

೩. ನಾಮಪ್ರಕೃತಿಗಳಿಗೆ ಸ್ಥಾನ, ಕಾಲ, ರೀತಿಗಳನ್ನು ತಿಳಿಸುವ ಸಂದರ್ಭಗಳಲ್ಲಿ ತದ್ಧಿತಪ್ರತ್ಯಯಗಳು ಸೇರಿ **ತದ್ಧಿತಾಂತಾವ್ಯಯ**ಗಳಾಗುತ್ತವೆ.
ಉದಾ:— ಅ) ಊರಿನ ತನಕ (ಸ್ಥಾನ)
ಆ) ಸಂಜೆಯವರೆಗೆ (ಕಾಲ)
ಇ) ಭೀಮನಂತೆ (ರೀತಿ)

### ಅಭ್ಯಾಸ ೬.

೧) ಮುಂದೆ ಕೊಟ್ಟಿರುವ ಪದಗಳು ಯಾವ ಬಗೆಯವು ?
ಬೇಗಿಲಿ, ಕುಡುಕ. ಜಂಭಗಾರ, ತಿಂಡಿಪೋತ, ತಾಳ್ಮೆ, ಕೇಡು, ಆಳುವವನು, ಮಲಗಲು, ಓದುತ್ತಾ, ಲಂಚವಣಿಗ, ಮಗುವಿನಂತೆ, ಹಳ್ಳಿಯ ತನಕ.

೨) ಕೃದಂತ, ತದ್ಧಿತಾಂತ ಎಂದರೇನು ? ಇವುಗಳಲ್ಲಿ ಪ್ರಕೃತಿ ಮತ್ತು ಪ್ರತ್ಯಯಗಳಾವುವು ?

೩) ಕೃದಂತಕ್ಕೂ ತದ್ಧಿತಾಂತಕ್ಕೂ ಇರುವ ಸಾಮ್ಯ ವೈಷಮ್ಯಗಳಾವುವು

೪) ಮುಂದಿನ ಪದಗಳಲ್ಲಿರುವ ಪ್ರತ್ಯಯಗಳಾವುವು ? ಅವು ಯಾವ ಅರ್ಥಗಳಲ್ಲಿ ಬಂದಿವೆ ?
ಮಾತುಗ, ಕಂಚುಗಾರ, ಕಮ್ಮಾರ, ಹೊಟ್ಟೆಬಾಕ, ಎರಡನೆಯವ, ಕಬ್ಬಿಗ, ಚಿತ್ರಗಾರ.

೫) ಇವುಗಳ ಭಾವಾರ್ಥ ರೂಪಗಳನ್ನು ತಿಳಿಸಿ:— (ಸೂ: ಉದು, ಇಕೆ ಪ್ರತ್ಯಯಗಳನ್ನು ಸೇರಿಸಲಾಗದು)
ಮರೆ, ಬಾಳು, ನಗು, ಬಯ್, ಹೊಳೆ.

---

## ೧೯. ಅವ್ಯಯಗಳು

ಲಿಂಗ, ವಚನ, ವಿಭಕ್ತಿಗಳಲ್ಲಿ ರೂಪಭೇದವನ್ನು ಹೊಂದದೆ ಒಂದೇ ರೀತಿಯಲ್ಲಿರುವ ಶಬ್ದವು ಅವ್ಯಯವೆನಿಸುವುದು. ಇದನ್ನು ಆರು ಮುಖ್ಯ ಭೇದಗಳಾಗಿ ವಿಂಗಡಿಸಬಹುದು. ಅವು ಯಾವುವೆಂದರೆ:—

**೧) ಸಾಮಾನ್ಯ ೨) ಅನುಕರಣ ೩) ಸಂಬಂಧಸೂಚಕ**
**೪) ಭಾವಸೂಚಕ ೫) ಕ್ರಿಯಾರ್ಥಕ ೬) ಸಾಪೇಕ್ಷಕ್ರಿಯಾರ್ಥಕ**

### ೧) ಸಾಮಾನ್ಯಾವ್ಯಯ

ಇದು ಕ್ರಿಯೆಯ ಕಾಲ, ಸ್ಥಾನ, ರೀತಿಗಳನ್ನು ತಿಳಿಸುತ್ತದೆ.

ಉದಾ: ಕಾಲ—ಈಗ, ಬಳಿಕ, ಒಡನೆ
ಸ್ಥಾನ—ಇತ್ತ, ಅತ್ತ, ಎತ್ತ.
ರೀತಿ—ಹಾಗೆ, ಹೀಗೆ, ಮೆಲ್ಲಗೆ.
ಅನುಕರಣ—ಭಗ್ಗನೆ, ಥಟ್ಟನೆ.

**೨) ಅನುಸರ್ಗಾವ್ಯಯ**

ವಿಭಕ್ತಿ ರೂಪಗಳಿಗೂ, ವಿಶೇಷಣ ಕೃದಂತಗಳಿಗೂ ಮುಂದೆ ಸೇರಿಕೊಂಡು ಬರುವ ಅವ್ಯಯಗಳು ಅನುಸರ್ಗಾವ್ಯಯಗಳಾಗಿರುವುವು.

ಉದಾ: ೧) ಅಂತೆ, ವರೆಗೆ, ತನಕ, ಹಾಗೆ, ಇಂತು.
೨) ಹೊರತು, ಅಲ್ಲದೆ, ಆಗಿ.

**೩) ಸಂಬಂಧಸೂಚಕಾವ್ಯಯ**

ಪದಗಳಲ್ಲಾಗಲೀ, ಪದಸಮುಚ್ಚಯದಲ್ಲಾಗಲೀ, ವಾಕ್ಯಗಳಲ್ಲಾಗಲೀ ಸಂಬಂಧವನ್ನು ತರುವ ಅವ್ಯಯಗಳಿಗೆ ಸಂಬಂಧಸೂಚಕಾವ್ಯಯಗಳೆಂದು ಹೆಸರು. ಉದಾ:—

ರಾಧೆ ಮತ್ತು ರುಕ್ಮಿಣಿ. ರಾಧೆ ಅಥವಾ ರುಕ್ಮಿಣಿ.

**೪) ಭಾವಸೂಚಕಾವ್ಯಯ** (ಅಥವಾ ನಿಪಾತಾವ್ಯಯ)

ಆಶ್ಚರ್ಯ, ಸಂಭ್ರಮ, ಪ್ರಶ್ನೆ, ಸಂಶಯ—ಮೊದಲಾದ ಮನಸ್ಸಿನ ಭಾವಗಳನ್ನು ತೋರಿಸುವ ಅವ್ಯಯಗಳಿಗೆ ಭಾವಸೂಚಕಾವ್ಯಗಳೆಂದು ಹೆಸರು
ಉದಾ: ಅಹಹ ! ಓಹೋ !! ಅಯ್ಯೋ ! ಏನು ? ಇತ್ಯಾದಿ.

**ಕ್ರಿಯಾರ್ಥಕಾವ್ಯಯ**

ರೂಪಭೇದವನ್ನು ಹೊಂದದೆ ಪೂರ್ಣಕ್ರಿಯಾಪದದ ಅರ್ಥವನ್ನು ಕೊಡುವ ಅವ್ಯಯಕ್ಕೆ ಕ್ರಿಯಾರ್ಥಕಾವ್ಯಯವೆಂದು ಹೆಸರು.

ಉದಾ:—ಉಂಟು, ಹೌದು, ಅಲ್ಲ, ಬೇಕು, ಬೇಡ, ಸಾಕು.

## ೬) ಸಾಪೇಕ್ಷಕ್ರಿಯಾರ್ಥಕಾವ್ಯಯ

ಅರ್ಥಪೂರ್ತಿಗಾಗಿ ಬೇರೊಂದು ಕ್ರಿಯೆಯ ಸಹಾಯವನ್ನು ಅಪೇಕ್ಷಿಸುವ ಕ್ರಿಯಾಪದಗಳು ಸಾಪೇಕ್ಷಕ್ರಿಯಾಪದಗಳು.

ಉದಾ:—ನೋಡುತ್ತಾ, ನೋಡಿ, ನೋಡದೆ.

### ಅಭ್ಯಾಸ ೭.

೧. ಇವು ಯಾವ ಬಗೆಯ ಪದಗಳು ?

ಹೌದು, ಆಗ, ಹೇಗೆ, ಅಥವಾ, ಮತ್ತು, ವರೆಗೆ, ಆಹಹ.

೨. ಅವ್ಯಯವೆಂದರೇನು ? ಇದರಲ್ಲಿರುವ ಮುಖ್ಯ ಭೇದಗಳಾವುವು ? ಉದಾಹರಣೆ ಕೊಡಿ.

೩. ಮುಂದಿನ ವಾಕ್ಯಗಳಲ್ಲಿ ಅವ್ಯಯಗಳನ್ನು ಗುರುತಿಸಿ:—

ಅ) ಛೇ ! ಎಂತಹ ಕೆಲಸ ಮಾಡಿದೆ ?

ಆ) ಅಯ್ಯೋ ! ಪುಸ್ತಕ ಓದುತ್ತಾ, ನಿದ್ದೆ ಬಂತಲ್ಲಾ ?

ಇ) ನೀನು ಅಥವಾ ನಾನು ಹೋದರೆ, ಆ ಕೆಲಸ ನಡೆಯುತ್ತದೆ; ಇಲ್ಲದಿದ್ದರೆ ಹೇಗೆ ? ಬೇಗ ಏಳು.

೪. ಕೃದಂತ ಮತ್ತು ತದ್ಧಿತಾಂತಾವ್ಯಯಗಳನ್ನು ಯಾವ ಬಗೆಯ ಅವ್ಯಯದೊಡನೆ ಸೇರಿಸಬಹುದು ?

# ೨೦. ವಿಶೇಷ ವಿಷಯಗಳು

## ೧. ವಿಶೇಷಣಗಳು

### ಅ) ನಾಮವಿಶೇಷಣಗಳು

ನಾಮಪದಗಳಿಗೆ ವಿಶೇಷಣಗಳಾಗಿ ಬರತಕ್ಕ ಶಬ್ದಗಳು ನಾಮ ವಿಶೇಷಣಗಳೆನಿಸುವುವು. ವಿಶೇಷ್ಯದ ಲಿಂಗ, ವಚನ, ಮತ್ತು ವಿಭಕ್ತಿಗಳನ್ನೇ ವಿಶೇಷಣವೂ ಹೊಂದುವುದು. ಉದಾ: ಚಿಕ್ಕದಾದ ಕರು, ಬಲ ವಾದ ಪೆಟ್ಟು, ಸುಂದರ ಚಿತ್ರ, ಕೆಂಪು ಕಣ್ಣುಗಳು.

### ಆ) ಕ್ರಿಯಾವಿಶೇಷಣ

ಕ್ರಿಯೆಯ ಕಾಲ, ದೇಶ, ರೀತಿ ಮೊದಲಾದುವನ್ನು ತಿಳಿಸುವ ಸಾಮಾನ್ಯಾವ್ಯಯಗಳಿಗೆ ಕ್ರಿಯಾವಿಶೇಷಣಗಳೆಂದು ಹೆಸರು.

ಉದಾ:—ಮೆಲ್ಲನೆ, ಕಠಿಣವಾಗಿ, ತೆಳ್ಳಗೆ, ದಪ್ಪನಾಗಿ.

### (ಇ) ಉಪವಿಶೇಷಣ

ವಿಶೇಷಣಗಳಿಗೆ ವಿಶೇಷಣವಾಗಿರುವ ಪದಗಳಿಗೆ ಉಪವಿಶೇಷಣ ಗಳೆಂದು ಹೆಸರು. ಉದಾ.—

ಬಹಳ ಮೆಲ್ಲನೆ ಮಾತನಾಡು, **ಬಹು** ದೊಡ್ಡ ಹುಲಿ

## ೨. ದ್ವಿರುಕ್ತಿ

ವಿಶೇಷಾರ್ಥ ತೋರುವಂತೆ ಕೆಲವು ಪದಗಳನ್ನು ಎರಡು ಬಾರಿ ಪ್ರಯೋಗಿಸುವುದಕ್ಕೆ **ದ್ವಿರುಕ್ತಿ**ಯೆಂದು ಹೆಸರು. ಉದಾ.—

ಕೊಟ್ಟೆಕೊಟ್ಟೆ. ಓಡುಓಡು. (ಸಂಭ್ರಮ) ಆಗಲಾಗಲಿ, ಇರುಇರು, (ಆಕ್ಷೇಪ) ಪದಗಳ ಆವೃತ್ತಿ : ಕಟ್ಟಕಡೆ, ನಟ್ಟನಡು.

## ೩. ಅನ್ವಯಕ್ರಮ

ವಾಕ್ಯದಲ್ಲಿ ಕರ್ತೃ, ಕರ್ಮ, ಕ್ರಿಯಾಪದಗಳೂ, ಅವುಗಳ ವಿಶೇಷಣಗಳೂ ಬಂದಿರತಕ್ಕ ಕ್ರಮಕ್ಕೆ ಅನ್ವಯಕ್ರಮವೆಂದು ಹೆಸರು.

ಉದಾ:—ನನ್ನ ತಮ್ಮನು ಅವನ ಸ್ನೇಹಿತನಿಗೆ ಒಂದು ಪುಸ್ತಕವನ್ನು ಕೊಟ್ಟನು. [ನನ್ನ, ಅವನ, ಒಂದು—ವಿಶೇಷಣಗಳು. ತಮ್ಮನು ಕರ್ತೃ ಸ್ನೇಹಿತನಿಗೆ ಪುಸ್ತಕವನ್ನು-ಕರ್ಮಪದಗಳು, ಕೊಟ್ಟನು—ಕ್ರಿಯೆ]

## ೪. ಅಧ್ಯಾಹಾರ

ವಾಕ್ಯದಲ್ಲಿ ಇಲ್ಲದಿರುವ ಪದಗಳನ್ನು ಊಹಿಸಿಕೊಂಡು ಸೇರಿಸುವುದಕ್ಕೆ "ಅಧ್ಯಾಹಾರ" ವೆಂದು ಹೆಸರು:

ಉದಾ:— ಬರೆ, ಇಲ್ಲಿ ನೋಡು: (ನೀನು-ಅಧ್ಯಾಹಾರ)

## ೫. ಪಲ್ಲಟಗಳು

**೧. ವಚನಪಲ್ಲಟ ೨. ವಿಭಕ್ತಿಪಲ್ಲಟ ೩. ಕಾಲಪಲ್ಲಟ**

**೧. ವಚನಪಲ್ಲಟ:** ಒಂದು ವಚನಕ್ಕೆ ಬದಲಾಗಿ ಮತ್ತೊಂದು ವಚನವನ್ನು ಪ್ರಯೋಗಿಸುವುದು.

ಅ) ಗುರುತ್ವ, ಹಾಸ್ಯ, ನಿಂದೆ-ಈ ಅರ್ಥಗಳು ತೋರುವಾಗ ಏಕವಚನಕ್ಕೆ ಬಹುವಚನವು ಬರುವುದು. ಉದಾ:—

೧: ಗುರುತ್ವಕ್ಕೆ-ಸ್ವಾಮಿಗಳು ಬಂದರು, ಗುರುಗಳು ಹೋದರು.
೨. ಹಾಸ್ಯಕ್ಕೆ-ಏನು ಶೆಟ್ಟರೇ! ನೀವೂ ತಿರುಪಕ್ಕೆ ಬಂದಿರಾ ?
೩. ನಿಂದೆಗೆ-ತಾವು ದೊಡ್ಡವರು ; ತಮ್ಮ ಸಹವಾಸ ಸಾಕು.

ಆ) ಜಾತಿ (ಗುಂಪು) ತೋರುವಾಗ ಬಹುವಚನಕ್ಕೆ ಬದಲಾಗಿ ಏಕವಚನವು ತೋರುವುದು.

ಉದಾ: ಜನ ಸೇರಿದೆ. ಹಣ್ಣು ಬಿದ್ದಿದೆ.

ಇ) ವಿಧೇಯ ವಿಶೇಷಣದಲ್ಲಿಯೂ ಬಹುವಚನಕ್ಕೆ ಬದಲಾಗಿ ಏಕವಚನವು ಬರುವುದು.

ಉದಾ:— ಸತ್ಪುರಷರು ಲೋಕಕ್ಕೆ ಭೂಷಣ.

(ಸೂಚನೆ:—ಇಲ್ಲಿ 'ಭೂಷಣ' ಎಂಬ ಮಾತು ವಿಧೇಯ ವಿಶೇಷಣ. ಭೂಷಣರು ಎಂಬ ಮಾತಿಗೆ ಬದಲು ಬಂದಿರುವುದು)

**೨. ವಿಭಕ್ತಿಪಲ್ಲಟ:** ವಾಕ್ಯಗಳಲ್ಲಿ ಒಂದು ವಿಭಕ್ತಿಗೆ ಬದಲಾಗಿ ಮತ್ತೊಂದು ವಿಭಕ್ತಿಯನ್ನು ಪ್ರಯೋಗಿಸಿ ಹೇಳುವುದಕ್ಕೆ ವಿಭಕ್ತಿಪಲ್ಲಟವೆಂದು ಹೆಸರು. ಉದಾ:—

ರಂಗನು ಊರಿಗೆ ಸೇರಿದನು. (ಇಲ್ಲಿ ಊರನ್ನು ಸೇರಿದನು ಎಂಬ ಮಾತಿಗೆ ಬದಲಾಗಿ ಊರಿಗೆ ಎಂಬುದು ಬಂದಿರುವುದರಿಂದ ದ್ವಿತೀಯೆಗೆ ಚತುರ್ಥೀ ಬಂದು ವಿಭಕ್ತಿಪಲ್ಲಟವಾಗಿದೆ.

**೩. ಕಾಲಪಲ್ಲಟ :** ಒಂದು—ಕಾಲದ ರೂಪಕ್ಕೆ ಬದಲಾಗಿ ಮತ್ತೊಂದು—ಕಾಲದ ರೂಪವನ್ನುಪಯೋಗಿಸುವುದಕ್ಕೆ ಕಾಲಪಲ್ಲಟವೆಂದು ಹೆಸರು. (ಕನ್ನಡದಲ್ಲಿ ಹೆಚ್ಚಾಗಿ ಭವಿಷತ್ಕಾಲ ರೂಪಕ್ಕೆಲ್ಲಾ, ವರ್ತಮಾನ ಪ್ರಯೋಗಗಳು ಬರುವುವು.)

ಉದಾ:—

ಅ) ನಾಳೆ ನಮ್ಮ ತಂದೆ ಊರಿಗೆ ಹೋಗುತ್ತಾರೆ. (ಹೋಗುವರು ಎಂಬರ್ಥ) (ಸೂ:—ಈ ವಾಕ್ಯದಲ್ಲಿ ಭವಿಷ್ಯತ್ಕಾಲ ರೂಪಕ್ಕೆ ಬದಲು ವರ್ತಮಾನರೂಪ ಬಂದಿದೆ.)

ಆ) ಇಗೋ ಬಂದೆ, ತಾಳು (ಬರುತ್ತೇನೆ ಎಂಬರ್ಥದಲ್ಲಿ ಬಂದೆ ಎಂದಿದೆ.) (ಬರುತ್ತೇನೆ=ವರ್ತಮಾನರೂಪ, ಬಂದೆ=ಭೂತರೂಪ)

ಇ) ಬರುವೆನು ತಾಳು (ಬರುತ್ತೇನೆ ಎಂಬರ್ಥದಲ್ಲಿ ಬರುವೆನು ಎಂದಿದೆ. ಇದು ಭವಿಷ್ಯತ್ಕಾಲ ರೂಪವಾದರೂ ವರ್ತಮಾನ ರೂಪದಲ್ಲಿ ಬಂದಿದೆ.)

## ೩. ಸಂಜ್ಞೆಗಳು

೧. **ಗುಣಿತಾಕ್ಷರ**—ವ್ಯಂಜನಕ್ಕೆ ಸ್ವರವು ಸೇರಿರುವುದು

ಪ್+ಅ=ಪ; ಶ್+ಉ=ಶು; ಕ್+ಐ=ಕೈ

೨. **ದ್ವಿತ್ವಾಕ್ಷರ**—ಒಂದೇ ವಿಧವಾದ ವ್ಯಂಜನಗಳು ಸೇರಿರುವುದು.
ಜ್+ಜ್+ಅ=ಜ್ಜ; ನ್+ನ್+ಅ=ನ್ನ

೩. **ಸಂಯುಕ್ತಾಕ್ಷರ**—ಒಂದು ವ್ಯಂಜನಕ್ಕೆ ಬೇರೆ ವ್ಯಂಜನ ಸೇರುವುದು.

ಕ್+ತ್+ಅ=ಕ್ತ; ಮ್+ನ್+ಎ=ಮ್ನೆ

೪. **ಶಿಥಿಲದ್ವಿತ್ವ**— ಒತ್ತಿ ಉಚ್ಚರಿಸದೆ ತೇಲಿಸಿ ಉಚ್ಚರಿಸುವ ಒತ್ತಕ್ಷರ

\+ \+ \+
ಅಮರ್ದು ಜಗಳ್ದಂ ನಿಮಿರ್ದಂ

(ಸೂ: ಛಂದಸ್ಸಿನಲ್ಲಿ ಶಿಥಿಲದ್ವಿತ್ವವು ಬರುವ ಕಡೆ **ಲಘು**ವಾಗಿರುತ್ತದೆ) ಇಲ್ಲಿ + ಗುರುತು ಹಾಕಿರುವ ವರ್ಣಗಳನ್ನು ಮಾತ್ರ ತೇಲಿಸಿ ಹೇಳಬೇಕು

೫. **ದೇಶೀಯಾಕ್ಷರಗಳು**—ಕನ್ನಡ ವರ್ಣಮಾಲೆಯಲ್ಲಿ ಇರುವ ಸಂಸ್ಕೃತದಲ್ಲಿಲ್ಲದ) ಐದು ಅಚ್ಚಗನ್ನಡದ ಅಕ್ಷರಗಳು—

ಱ ೞ ಳ ಎ ಒ

[ಸೂ: ಱ=ಶಕಟರೇಫ ಬಂಡಿಯರೇಫ (ರರ) ೞ=ರಳ, ಳ=ಕುಳ]

೬. **ವಿಶೇಷಣ ಮತ್ತು ವಿಶೇಷ್ಯ**—ಯಾವುದಾದರೊಂದರ ಗುಣ, ರೀತಿ ಮೊದಲಾದ ವಿಶೇಷವನ್ನು ತಿಳಿಸುವ ಪದವು (ಅಥವಾ ಪದಗಳ ಗುಂಪು) **ವಿಶೇಷಣವು.** ಅಂತಹ ವಿಶೇಷಾಂತವಿರುವುದು **ವಿಶೇಷ್ಯವು.**

| ವಿಶೇಷಣ | ವಿಶೇಷ್ಯ |
|---|---|
| ೧. ಒಳ್ಳೆಯ | ಹುಡುಗರು |
| ೨. ದೊಡ್ಡದಾದ, ಹಸಿದ | ಹುಲಿಯು |
| ೩. ಚೆನ್ನಾಗಿ | ಓದು |
| ೪. ಬೇಗನೆ | ಬಾ |

(ಸೂ:—ನಾಮಪದಕ್ಕೆ ವಿಶೇಷಣವಾಗಿದ್ದರೆ ನಾಮವಿಶೇಷಣವೆಂದೂ, [ಉದಾ: ೧, ೨] ಕ್ರಿಯಾ ಪದಕ್ಕೆ ವಿಶೇಷಣವಾಗಿದ್ದರೆ ಕ್ರಿಯಾವಿಶೇಷಣವೆಂದೂ [ಉದಾ: ೩, ೪] ತಿಳಿಯಬೇಕು)

## ೭. ಕಾರಕಕೃದಂತ

ಗುಣವಾಚಕಗಳಂತೆ ನಾಮಪದಗಳನ್ನು ವಿಶೇಷಿಸುವ ಶಬ್ದಗಳು ಕಾರಕಕೃದಂತಗಳು. ಇವು ಧಾತುಗಳಿಂದಾದ ಪದಗಳು. ಧಾತುಗಳಿಗೆ ವರ್ತಮಾನ ಭೂತ ಭವಿಷ್ಯದ್ರೂಪಗಳಲ್ಲಿ ಅ ಪ್ರತ್ಯಯವೂ, ನಿಷೇಧ ರೂಪ ದಲ್ಲಿ ಅದ ಪ್ರತ್ಯಯವೂ ಸೇರಿದರೆ ಕಾರಕ ಕೃದಂತಗಳಾಗುತ್ತವೆ.

ಉದಾ:—

| ರೂಪ | ಕಾರಕ ಕೃದಂತ | | ನಾಮಪದ |
|---|---|---|---|
| ೧ ಭೂತ | — ಮಾಡಿದ | ಕೆಲಸ. | (ಇಲ್ಲಿ ಕರ್ತೃಕಾರಕವಾಗಿದೆ) |
| ೨ ವರ್ತಮಾನ ಭವಿಷ್ಯತ್ | — ಮಾಡುವ | | |
| ೩ ನಿಷೇಧ | — ಮಾಡದ | | |

## ೮. ಧಾತು

ಧಾತುವು ಕ್ರಿಯಾರ್ಥವನ್ನು ಕೊಡುವ ಪದವಾಗಿರುತ್ತದೆ ಕ್ರಿಯಾ ಪದದ ಮೂಲರೂಪವೇ ಧಾತುವೆನಿಸುವುದು.

ಉದಾ: ನುಡಿ, ಓಡು, ನೆಗೆ, ನಂಬು

ಧಾತುಗಳಲ್ಲಿ ಮೂಲರೂಪವನ್ನು ಸಹಜಧಾತುಗಳೆಂದೂ, 'ಇಸು' ಪ್ರತ್ಯಯಾಂತವಾಗಿರುವುದನ್ನು ಪ್ರತ್ಯಯಾಂತ ಧಾತುವೆಂದೂ ಹೇಳುವರು.

ಉದಾ: ಸಹಜ ಧಾತು—ಓಡು, ನಂಬು.
ಪ್ರತ್ಯಯಾಂತ ಧಾತು—ಓಡಿಸು, ನಂಬಿಸು.

### ಸಾಧಿತಧಾತು

ಧಾತುವಿನ ಮುಂದೆ 'ಇಸು' ಪ್ರತ್ಯಯ ಸೇರಿದ್ದರೆ ಅಥವಾ ನಾಮ ಪ್ರಕೃತಿಗಳ ಮುಂದೆ ಧಾತುವಾಗಲೀ, "ಇಸು" ಪ್ರತ್ಯಯವಾಗಲೀ ಸೇರಿದ್ದರೆ ಸಾಧಿತಧಾತುವಾಗುವುದು. ಉದಾ:—

೧) ಧಾತು + ಇಸು ; ಮಾಡಿಸು (ಮಾಡು + ಇಸು)
೨) ನಾಮ + ಧಾತು ; ಕಷ್ಟಪಡು (ಕಷ್ಟ + ಪಡು)
೩) ನಾಮ + ಇಸು ; ಸುಖಿಸು (ಸುಖ + ಇಸು)

## ೨೧. ಪದಸ್ವರೂಪ ಕಥನ

ವಾಕ್ಯದಲ್ಲಿರುವ ಪದಗಳು ಯಾವ ಗುಂಪಿಗೆ ಸೇರಿದುವೆಂಬುದನ್ನೂ, ಅವುಗಳ ಪರಸ್ಪರ ಸಂಬಂಧವನ್ನೂ ನಿಷ್ಕರ್ಷಿಸಿ ತಿಳಿಸುವುದಕ್ಕೆ **ಪದಸ್ವರೂಪ ಕಥನ**ವೆಂದು ಹೆಸರು. (ಇದನ್ನು ಕೆಲವರು **ರೂಪನಿಷ್ಪತ್ತಿ** ಎಂಬುದಾಗಿ ವ್ಯವಹರಿಸುವರು. ಆದರೆ ರೂಪನಿಷ್ಪತ್ತಿಯ ಅರ್ಥವು, ಪದಗಳು ಹೇಗೆ ಹುಟ್ಟಿವೆಯೆಂಬುದಕ್ಕೆ ಮಾತ್ರ ಅನ್ವಯವಾಗುವುದರಿಂದ ಪದಸ್ವರೂಪಕ್ಕೆ ಬದಲು ಇಟ್ಟುಕೊಳ್ಳದಿರುವುದು ಮೇಲು.)

ಉದಾ:—ಬುದ್ಧಿವಂತರಾದ ವಿದ್ಯಾರ್ಥಿಗಳು ಬೇಗನೆ ಕಠಿಣವಾದ ವಿಷಯಗಳನ್ನು ತಿಳಿಯುತ್ತಾರೆ. (ವಾಕ್ಯ)

ಬುದ್ಧಿವಂತರಾದ—(ನಾಮವಿಶೇಷಣ) ಗುಣವಾಚಕ

ವಿದ್ಯಾರ್ಥಿಗಳು—ನಾಮಪದ (ನಾ. ವಾ.) ಪು. ಸ್ತ್ರೀಲಿಂಗ, ಬಹುವಚನ, ಪ್ರಥಮಾವಿಭಕ್ತಿ, ಪ್ರಥಮಪುರುಷ, ತಿಳಿಯುತ್ತಾರೆ ಎಂಬುದರ ಕರ್ತೃಪದ.

ಬೇಗನೆ—ಕ್ರಿಯಾವಿಶೇಷಣ. (ಸಾಮಾನ್ಯಾವ್ಯಯ)

ಕಠಿಣವಾದ—ನಾಮವಿಶೇಷಣ. (ವಿಷಯಗಳನ್ನು ಎನ್ನುವ ನಾಮ ಪದವನ್ನು ವಿಶೇಷಿಸುವುದು)

ವಿಷಯಗಳನ್ನು—ನಾಮಪದ, ನಪುಂಸಕಲಿಂಗ, ಬಹುವಚನ, ದ್ವಿತೀಯಾವಿಭಕ್ತಿ, ಕರ್ಮಪದ.

ತಿಳಿಯುತ್ತಾರೆ—ಕ್ರಿಯಾಪದ, ಸಕರ್ಮಕ, ವರ್ತಮಾನಕಾಲ, ಪ್ರ. ಪುರುಷ, ಪುಂ.ಸ್ತ್ರೀಲಿಂಗ, ಬಹುವಚನ, ವಿದ್ಯಾರ್ಥಿಗಳು ಎನ್ನುವುದರ ಕ್ರಿಯೆ.

## ೨೨. ರೂಪನಿಷ್ಪತ್ತಿ

ಶಬ್ದಗಳು ಹೇಗೆ ಸಿದ್ಧವಾಯಿತೆಂಬುದನ್ನು (ಅವುಗಳ ಮೂಲ ಪ್ರಕೃತಿ, ವಿಕಾರರೂಪ [ಸಿದ್ಧರೂಪ], ಸೇರಿರುವ ಪ್ರತ್ಯಯ ಇವುಗಳ ವಿವರಣೆಯೊಂದಿಗೆ) ತಿಳಿಸುವುದಕ್ಕೆ **ರೂಪನಿಷ್ಪತ್ತಿ**ಯೆಂಬರ್ಥವಿರುವುದು. ಸಮಾಸಪದ, ಕ್ರಿಯಾಪದ ಮತ್ತು ತದ್ಧಿತಾಂತಾದಿಗಳಲ್ಲಿ ರೂಪನಿಷ್ಪತ್ತಿಗಳ ಕಡೆ ಗಮನ ಕೊಡಬೇಕು.

### ೧) ಸಮಾಸ ಪದಗಳು

ಅ) ಹೆಮ್ಮರ: ಹಿರಿದು+ಮರ=ಹೆಮ್+ಮರ=ಹೆಮ್ಮರ

ಆ) ಕಾರಿರುಳ್: ಕರಿದು+ಇರುಳ್=ಕಾರ್+ಇರುಳ್

ಇ) ಇತ್ತಂಡ: ಎರಡು+ತಂಡ=ಇತ್+ತಂಡ

ಈ) ಪಂದೊಗಲ್: ಪಸಿದು+ತೊಗಲ್=ಪಂದೊಗಲ್

### ೨) ಕ್ರಿಯಾಪದಗಳು

ಬರುತ್ತಿರುವವನು: ಬರುತ್ತಾ+ಇರುವವನು
ಬರು+ಉತ್ತ+ಇರು+ಉವ+ಅವನು

### ೩) ತದ್ಧಿತಾಂತ

ಕನ್ನಡಿಗ: (ಕನ್ನಡ+ಇಗ) ಹೂವಾಡಿಗಿತ್ತಿ: (ಹೂ+ಆಡಿಗ+ಇತ್ತಿ)

## ಅಭ್ಯಾಸ ೮.

೧) ಮುಂದಿನ ವಾಕ್ಯಗಳ ಪ್ರತಿಯೊಂದು ಪದದ ಪದಸ್ವರೂಪ ಕಥನವನ್ನು ತಿಳಿಸಿ:—

ಅ) ಜಪಾನಿನಲ್ಲಿ ದೊಡ್ಡ ಭೂಕಂಪವಾಗಿ, ಬಹಳ ಜನರು ಸತ್ತರು.

ಆ) ಅಯ್ಯೋ! ಎಂತಹ ಅನರ್ಥವಾಯಿತು; ನೀನು ಏನು ಮಾಡುತ್ತಿದ್ದೆ?

ಇ) ಈಗ ಭಾರತೀಯರಿಗೆ ಸ್ವಾತಂತ್ರ್ಯ ಬಂದಿದೆಯಲ್ಲವೆ?

ಈ) ಹೌದು ಬಂದಿದೆ. ಬಡತನ ಎಂದಿಗೆ ತಪ್ಪುವುದೆಂಬುದನ್ನು ತಿಳಿಯಲಾರೆ.

೨) ಮುಂದೆ ಕೊಟ್ಟಿರುವ ಪದಗಳ ರೂಪನಿಷ್ಪತ್ತಿಯನ್ನು ತಿಳಿಸಿ:—

ಕೊಂಡೆನು, ಪೊರನೊಟ್ಟನು, ಎಚ್ಚತ್ತನು, ಕರೆದಾಳು, ಇಂಚರ, ಜೆನ್ನೀರು, ಒಕ್ಕಲಿತಿ, ಚೆನ್ನಿಗ.

---

## ೨೩. ತತ್ಸಮ—ತದ್ಭವಗಳು

| ತತ್ಸಮ | ತದ್ಭವ | ತತ್ಸಮ | ತದ್ಭವ |
|---|---|---|---|
| ಅಕ್ಷರ | ಅಕ್ಕರ | ಪತಿವ್ರತಾ | ಹದಿಬದೆ |
| ಅಮೃತ | ಅಮರ್ದು | ಪಾದುಕಾ | ಹಾವುಗೆ |
| ಅಟವಿ | ಅಡವಿ | ಪ್ರಯಾಣ | ಪಯಣ |
| ಆಕರ | ಆಗರ | ಪ್ರವಾಳ | ಹವಳ |
| ಆಕಾಶ | ಆಗಸ | ಪೌರ್ಣಿಮಾ | ಹುಣ್ಣಿಮೆ |
| ಆಶ್ಚರ್ಯ | ಅಚ್ಚರಿ | ಪ್ರಾಣ | ಹರಣ |

| | | | |
|---|---|---|---|
| ಇಂದ್ರ | ಇಂದಿರ | ಪುಸ್ತಕ | ಹೊತ್ತಗೆ |
| ಉದ್ಯೋಗ | ಉಜ್ಜುಗ | ಬ್ರಹ್ಮ | ಬೊಮ್ಮ |
| ಋಷಿ | ರಿಸಿ | ಭೂಮಿ | ಬುವಿ |
| ಐಶ್ವರ್ಯ | ಐಸಿರಿ | ಮೃತ್ಯು | ಮಿತ್ತು |
| ಕಥಾ | ಕತೆ | ಮೃಗ | ಮಿಗ |
| ಕಾರ್ಯ | ಕಜ್ಜ | ಮುಖ | ಮೊಗ |
| ಕಾವ್ಯ | ಕಬ್ಬ | ಮಹಾನಸ | ಬಾಣಸ |
| ಕುಮಾರ | ಕುವರ | ಯಮ | ಜವ |
| ಖನಿ | ಗಣಿ | ಯಜ್ಞ | ಜನ್ನ |
| ಗ್ರಾಮೀಣ | ಗಾವಿಲ | ಯೌವನ | ಜೌವನ |
| ಗೋಷ್ಠಿ | ಗೊಟ್ಟಿ | ರತ್ನ | ರನ್ನ |
| ಚತುರ್ಥೀ | ಚೌತಿ | ರಾಕ್ಷಸ | ರಕ್ಕಸ |
| ಜ್ಯೋತ್ಸ್ನಾ | ಜೊನ್ನ | ಲಕ್ಷ್ಮೀ | ಲಕುಮಿ |
| ತ್ಯಾಗ | ಚಾಗ | ವರ್ಣ | ಬಣ್ಣ |
| ತೃಣ | ತಿಣ | ವಾಪಿ | ಬಾವಿ |
| ದೀಪಿಕಾ | ದೀವಿಗೆ | ವಿಜ್ಞಾನ | ಬಿನ್ನಣ |
| ದ್ಯೂತ | ಜೂಜು | ವಿದ್ಯಾ | ಬಿಜ್ಜೆ |
| ನಿತ್ಯ | ನಿಚ್ಚ | ಶೂನ್ಯ | ಸೊನ್ನೆ |
| ನಿದ್ರಾ | ನಿದ್ದೆ | ಶಯ್ಯಾ | ಸಜ್ಜೆ |
| ನಿಶ್ಚಯ | ನಿಕ್ಕುವ | ಶೃಂಖಲಾ | ಸಂಕಲೆ |
| ಶ್ಮಶಾನ | ಮಸಣ | ಶ್ರೀ | ಸಿರಿ |

ಹೀಗೆಯೇ

| | | | |
|---|---|---|---|
| ಕುಠಾರ | ಕೊಡಲಿ | ಲಕ್ಷಣ | ಲಚ್ಚಣ |
| ಘಟಿಕಾ | ಗಳಿಗೆ | ವಾಲ | ಬಾಲ |
| ಜಾತಿ | ಜಾಜಿ | ವಂಧ್ಯಾ | ಬಂಜೆ |
| ಸ್ಥಾನ | ತಾಣ | ಹಂಸ | ಅಂಚೆ |

# ೨೪. ಹಳಗನ್ನಡ ವಿಚಾರ

## ೧) ವರ್ಣವಿಚಾರ

ಅಚ್ಚಗನ್ನಡದಲ್ಲಿ ೪೭ ಅಕ್ಷರಗಳಿವೆ. 'ಋ' ವರ್ಣವನ್ನು ಬಿಟ್ಟುಳಿದ (ಅಕಾರದಿಂದ ಔಕಾರದವರೆಗಿರುವ) ಹನ್ನೆರಡು ಸ್ವರಗಳು. ಕ, ಚ, ಟ, ತ, ಪ ವರ್ಗಗಳಿಂದಾಗುವ ಇಪ್ಪತ್ತೈದು ವರ್ಗೀಯ ವ್ಯಂಜನಗಳು. ಯ, ರ, ಲ, ವ, ಸ, ಹ, ಳ, ಱ, ೞ—ಈ ಒಂಭತ್ತು, ಅವರ್ಗೀಯ ವ್ಯಂಜನಗಳು. ಅನುಸ್ವಾರ (ಂ) ಒಂದು.

ಈ ಸಂದರ್ಭದಲ್ಲಿ ಋವರ್ಣ, ಶ, ಷ, ವಿಸರ್ಗ (ಃ) ಗಳು ಸಂಸ್ಕೃತ ವರ್ಣಮಾಲೆಯಿಂದ ಹೊಸಗನ್ನಡಕ್ಕೆ ಸೇರಿವೆಯೆಂದು ತಿಳಿಯಬೇಕಾಗಿದೆ.

## ೨) ಶಬ್ದಗಳು

ಮುಂದೆ ಕಾಣಿಸಿರುವಂತೆ ಅಚ್ಚಗನ್ನಡ ಶಬ್ದಗಳನ್ನು (ಅಥವಾ ದೇಶ್ಯಗಳನ್ನು) ಮೂರು ವಿಧಗಳಾಗಿ ವಿಂಗಡಿಸಿರುವರು.

**ಅ) ಮೂಲ ಶಬ್ದಗಳು** [ಪ್ರಕೃತಿ ರೂಪದಲ್ಲಿರುವುವು]
ಉದಾ:—ಕಲ್, ಪೂ, ಪಡೆ.

**ಆ) ನಿಷ್ಪನ್ನ ಶಬ್ದಗಳು** [ಪ್ರಕೃತಿಯಿಂದ ಹುಟ್ಟಿದವು]
ಉದಾ:—ಕಲ್ಕುಟಿಗ, ಪೂವಡಿಗ, ಪಡೆವಳ.
[ಸೂ: ಇಲ್ಲಿ ಕುಟಿಗ, ಅಡಿಗ, ವಳ ಇವು ಪ್ರತ್ಯಯಗಳು.]

**ಇ) ಸಮಾಸ ಶಬ್ದಗಳು** [ಎರಡು ಮೂರು ಪ್ರಕೃತಿಗಳು ಸೇರಿ ಆಗುವ ರೂಪಗಳು]
ಉದಾ:—ಬೆಳ್ದಿಂಗಳ್, ನಿಡುಮೂಗಿ, ಚೆಂಬೊನ್.

## ೩) ನಾಮಪದ

ನಾಮಪದವು ಲಿಂಗ, ವಚನ ಮತ್ತು ವಿಭಕ್ತಿಗಳಿಂದ ಕೂಡಿರುತ್ತದೆ

ಎಂಬುದನ್ನು ಹಿಂದೆಯೇ ಹೇಳಲಾಗಿದೆ. ಈ ಸಂದರ್ಭಗಲ್ಲಿ ಹಳಗನ್ನಡ ಶಬ್ದಗಳು ಯಾವ ರೀತಿ ಬೇರೆಬೇರೆ ಪ್ರತ್ಯಯಗಳನ್ನು ಹೊಂದುತ್ತವೆಯೆಂಬುದನ್ನು ತಿಳಿಯಬೇಕಾಗಿದೆ.

| **ನಾಮವಾಚಕ:** | **ಪುಲ್ಲಿಂಗ** | **ಸ್ತ್ರೀಲಿಂಗ** |
|---|---|---|
| | ಚದುರನ್ | ಚದುರೆ |
| | ಕನ್ನಡಿಗನ್ | ಕನ್ನಡಿತಿ |

| **೧. ಲಿಂಗ** | **ಗುಣವಾಚಕ** | **ಸಂಖ್ಯಾವಾಚಕ** | **ಸರ್ವನಾಮ** |
|---|---|---|---|
| ಪು. | ಒಳ್ಳಿದನ್ | ಓರ್ವನ್ | ಅವನ್ |
| ಸ್ತ್ರೀ. | ಒಳ್ಳಿದಳ್ | ಓರ್ವಳ್ | ಅವಳ್ |
| ನ. | ಒಳ್ಳಿತು | ಒಂದು | ಅದು |

(ಸೂ: ಇಲ್ಲಿ ಅನ್, ಅಳ್, ತು, ದು ಎಂಬಿವು ಲಿಂಗಸೂಚಕ ಪ್ರತ್ಯಯಗಳು)

| **೨. ವಚನ** | **ಕೆಲವು ಹಳಗನ್ನಡದ ರೂಪಗಳು** | | |
|---|---|---|---|
| ಏಕ | ದೇವನ್ | ಗುರು | ಮಗು |
| ಬಹು | ದೇವರ್ | ಗುರುಗಳ್ | ಮಕ್ಕಳ್ |

(ಸೂ: ಮೇಲ್ಕಂಡ ಬಹುವಚನ ರೂಪಗಳಲ್ಲಿ ಅರ್, ಗಳ್, ಕಳ್ ಎಂಬ ಪ್ರತ್ಯಯಗಳಿವೆ. ಹೀಗೆಯೇ ವಿರ್, ದಿರ್, ಇರ್, ವು, ಅವು ಮೊದಲಾದ ಪ್ರತ್ಯಯಗಳು ಇತರೆಡೆಗಳಲ್ಲಿ ಬರುವುವು.)

| **೩. ವಿಭಕ್ತಿ** | **ಪ್ರತ್ಯಯ** | **ಏಕವಚನ** | **ಬಹುವಚನ** |
|---|---|---|---|
| ಪ್ರ. | ಮ್ | ದೇವಂ | ದೇವರ್ |
| ದ್ವಿ. | ಅಂ | ದೇವನಂ | ದೇವರಂ |
| ತೃ. | ಇಂ | ದೇವನಿಂ | ದೇವರಿಂ |
| ಚ. | ಗೆ, ಕೆ, | ದೇವಂಗೆ | ದೇವರ್ಗೆ |
| ಪಂ. | ಅತ್ತಣಿಂ | ದೇವನತ್ತಣಿಂ | ದೇವರತ್ತಣಿಂ |

| | | | |
|---|---|---|---|
| ಷ. | ಅ | ದೇವನ | ದೇವರ |
| ಸ. | ಒಳ್ | ದೇವನೊಳ್ | ದೇವರೊಳ್ |
| | ಎ, ಏ | ದೇವನೇ / ಅ, ಆ | ದೇವರೇ / ದೇವರ್ಕಳಿರಾ |

## ೪. ಕ್ರಿಯಾಪದ

ಧಾತುಗಳಿಗೆ ಆಖ್ಯಾತ ಪ್ರತ್ಯಯಗಳನ್ನು ಸೇರಿಸುವಾಗ ಮೂರು ಕಾಲಗಳಲ್ಲಿಯೂ ಮೂರು ವಿಧ ಕಾಲಸೂಚಕ ಪ್ರತ್ಯಯಗಳು ಬರುವುವೆಂಬು ದನ್ನು ಹಿಂದೆಯೇ ತಿಳಿಸಲಾಗಿದೆ. ಹಳಗನ್ನಡ ಕಾಲಸೂಚಕ ಪ್ರತ್ಯಯಗಳಾ ವುವೆಂದರೆ:—

| ಕಾಲ | ಕಾಲಸೂಚಕ ಪ್ರ.+ಆಖ್ಯಾತ ಪ್ರತ್ಯಯ | ಉದಾಹರಣೆ |
|---|---|---|
| ವರ್ತಮಾನ | ದಪ + ಅನ್ | ನೋಡಿದಪಂ |
| ಭೂತ | ದ + ಅನ್ | ನೋಡಿದಂ |
| ಭವಿಷ್ಯತ್ | ವ + ಅವ್ | ನೋಡುವಂ |

(ಸೂ: ಮೇಲ್ಕಂಡ ಧಾತುವಿಗೆ ಕಾಲಸೂಚಕ ಪ್ರತ್ಯಯಗಳನ್ನು ಸೇರಿಸಿದ ನಂತರ ಆಖ್ಯಾತ ಪ್ರತ್ಯಯಗಳನ್ನು ಸೇರಿಸಿ ಕ್ರಿಯಾರೂಪಗಳನ್ನು ನಡೆಯಿಸ ಬೇಕು. ಉದಾ:— ನೋಡಿದಪಂ, ನೋಡಿದಂ, ನೋಡುವಂ.

### ಕ್ರಿಯಾಪದ ಹಳಗನ್ನಡ ರೂಪಗಳು

| ರೂಪಗಳು | ಪುರುಷ | ಲಿಂಗ | ಏಕವಚನ | ಬಹುವಚನ |
|---|---|---|---|---|
| ವರ್ತಮಾನಕಾಲ : | ಪ್ರ. | ಪು. | ನೋಡಿದಪಂ | ನೋಡಿದಪರ್ |
| | | ಸ್ತ್ರೀ. | ನೋಡಿದಪಳ್ | |
| | | ನ. | ನೋಡಿದಪ್ಪುದು | ನೋಡಿದಪ್ಪುವು |
| | ಮ. | | ನೋಡಿದಪಯ್ | ನೋಡಿದಪಿರ್ |
| | ಉ. | | ನೋಡಿದಪೆಂ | ನೋಡಿದಪೆವು |

| | | | | |
|---|---|---|---|---|
| ಭೂತಕಾಲ : | ಪ್ರ. | ಪು. | ನೋಡಿದಂ | ನೋಡಿದರ್ |
| | | ಸ್ತ್ರೀ. | ನೋಡಿದಳ್ | |
| | | ನ. | ನೋಡಿದುದು | ನೋಡಿದುವು |
| | ಮ. | | ನೋಡಿದೆ | ನೋಡಿದಿರ್ |
| | ಉ. | | ನೋಡಿದೆಂ | ನೋಡಿದೆವು |
| ಭವಿಷ್ಯತ್ಕಾಲ : | ಪ್ರ. | ಪು. | ನೋಡುವಂ | ನೋಡುವರ್ |
| | | ಸ್ತ್ರೀ. | ನೋಡುವಳ್ | |
| | | ನ. | ನೋಡುವುದು | ನೋಡುವುವು |
| | ಮ. | | ನೋಡುವಯ್ | ನೋಡುವಿರ್ |
| | ಉ. | | ನೋಡುವೆಂ | ನೋಡುವೆವು. |

| | | ವಿಧ್ಯರ್ಥ | | ನಿಷೇಧಾರ್ಥ | |
|---|---|---|---|---|---|
| ಪುರುಷ | ಲಿಂಗ | ಏಕ | ಬಹು | ಏಕ | ಬಹು |
| ಪ್ರಥಮ | ಪು. | ನೋಡಲಿ | ನೋಡಲಿ | ನೋಡಂ | ನೋಡರ್ |
| | ಸ್ತ್ರೀ. | ,, | ,, | ನೋಡಳ್ | |
| | ನ. | ನೋಡುಗೆ | ನೋಡುಗೆ | ನೋಡದು | ನೋಡವು |
| ಮಧ್ಯಮ | | ನೋಡುವುದು | ನೋಡಿಂ | ನೋಡೆ | ನೋಡರಿ |
| ಉತ್ತಮ | | ನೋಡುವೆಂ | ನೋಡುವಂ | ನೋಡೆಂ | ನೋಡೆವು |

[ಸೂ.:—ಸಂಭಾವನಾರ್ಥರೂಪವು ಹೊಸಗನ್ನಡರೂಪದಂತಿರುತ್ತದೆ.]

## ೫. ಹಳಗನ್ನಡದ ರೂಪನಿಷ್ಪತ್ತಿ

ಯಾವುದೊಂದು ಶಬ್ದದ ರೂಪನಿಷ್ಪತ್ತಿಯನ್ನು ತಿಳಿಯಬೇಕಾದರೂ ಮೊದಲು ಶಬ್ದದ ಮೂಲರೂಪವನ್ನು ತಿಳಿದು ಅದರ ಮುಂದೆ ಸೇರಿರುವ ಪ್ರತ್ಯಯಗಳನ್ನು ಬೇರೆ ಬೇರೆ ವಿಂಗಡಿಸಿಕೊಳ್ಳಬೇಕು. ದೇಶ್ಯ ಶಬ್ದಗಳ ರೂಪನಿಷ್ಪತ್ತಿ ಕ್ರಮವನ್ನು ಮುಂದೆ ಕಾಣಬಹುದು.

ಅ) ಶಬ್ದಗಳು: ಪ್ರಕೃತಿ ಪ್ರತ್ಯಯ ರೂಪ

೧: ಮೂಲ: ಉಸಿರ್+ದ+ಅಂ = ಉಸಿರ್ದಂ
ಉಸಿರ್+ದಪ+ಅಯ್ = ಉಸಿರ್ದಪಯ್
ಉಸಿರ್+ವ+ಅಂ = ಉಸಿರ್ವಂ

೨. ನಿಷ್ಪನ್ನ: ಅಂಜಿಕೆ (ಅಂಜು+ಇಕೆ)+ಅಂ = ಅಂಜಿಕೆಯಂ
ನಂಬುಗೆ (ನಂಬು+ಗೆ)+ಇಂ = ನಂಬುಗೆಯಿಂ

೩. ಸಮಾಸ: ಬೆಳ್ದಿಂಗಳ್(ಬಿಳಿದು+ತಿಂಗಳ್)+ಒಳ್ = ಬೆಳ್ದಿಂಗಳೊಳ್
ಮರೆವುಗು (ಮರೆ+ಪುಗು)+ಅಲ್ = ಮರೆವುಗಲ್

ಆ) ಒಳಭೇದಗಳು

ಪ್ರಕೃತಿ + ಪ್ರತ್ಯಯ + ಆಗಮ + ಪ್ರ. = ರೂಪ

೧. ಕೃದಂತ :— ಧಾತು + ಕೃತ್

| | | | | | |
|---|---|---|---|---|---|
| ಒಲವು | ಒಲ್ | ಅವು | ಇನ್ | ಗೆ | = ಒಲವಿಂಗೆ |
| ಕೂರ್ಮೆ | ಕೂರ್ | ಮೆ | ಯ್ | ಅ | = ಕೂರ್ಮೆಯ |
| ಬಿಗಿತ | ಬಿಗಿ | ತ | — | ಮ್ | = ಬಿಗಿತಂ |

೨. ತದ್ಧಿತಾಂತ :— ನಾಮಪ್ರಕೃತಿ + ತದ್ಧಿತ

| | | | | | |
|---|---|---|---|---|---|
| ಮಾತಾಳಿ | ಮಾತು | ಆಳಿ | ಯ್ | ಅಂ | = ಮಾತಾಳಿಯಂ |
| ಮಾಲೆಗಾರ | ಮಾಲೆ | ಗಾರ | — | ಅರ್ | = ಮಾಲೆಗಾರರ್ |
| ದೇವುಳಿಗ | ದೇವ | ಉಳಿಗ | ಅನ್ | ಒಳ್ | = ದೇವುಳಿಗನೊಳ್ |

೩. ಸಮಾಸ :— ಪದ ಪದ ರೂಪ

| | | | | | |
|---|---|---|---|---|---|
| ಎಳ್ತರ್ | ಎಳ್ | ತರ್ | | ಅಲ್ | = ಎಳ್ತರಲ್ |
| ಮಲರ್ಗಣ್ | ಮಲರ್ | ಕಣ್ | ಅಮ್ | ಅಂ | = ಮಲರ್ಗಣ್ಣಮಂ |
| ಕೆಳೆಗೊಳ್ | ಕೆಳೆ | ಕೊಳ್ | ದ್ | ಅಂ | = ಕೆಳೆಗೊಂಡಂ |

| ೪ ಧಾತು: | ಧಾತು + | ವಿ. ಪ್ರತ್ಯಯ + | ಆ. ಪ್ರ | = ಕ್ರಿ. ಪದ |
|---|---|---|---|---|
| ನುಡಿ | ನುಡಿ | ದಪ | ಎಂ | = ನುಡಿದಪೆಂ |
| ಇಂಬುಕೆಯ್ | ಇಂಬುಕೆಯ್ | ವ | ಇರ್ | = ಇಂಬುಕೆಯ್ವರ್ |
| ಮಿಗು | ಮಿಗು | ದ | ಅಂ | = ಮಿಕ್ಕಂ |

| ೫. ಅಪೂರ್ಣಕ್ರಿಯೆ: | ಧಾತು | ವಿ. ಪ್ರ. | ಆಗಮ | ಪ್ರ. | = ರೂಪ |
|---|---|---|---|---|---|
| ನೋಡುತ್ತ | ನೋಡು | ಉತ್ತ | ಉಂ | — | = ನೋಡುತ್ತುಂ |
| ಪಾಡದೆ | ಪಾಡು | — | ಅದೆ | — | = ಪಾಡದೆ |
| ಕಂಡು | ಕಾಣ್ | ದ | — | ಒಡೆ | = ಕಂಡೊಡೆ |

## ಅಭ್ಯಾಸ ೯.

೧. ಹಳಗನ್ನಡ ವರ್ಣಮಾಲೆಯಲ್ಲಿರುವ ಅಕ್ಷರಗಳೆಷ್ಟು ? ಅವು ಯಾವುವು ?

೨. ಹಳಗನ್ನಡ ಶಬ್ದಗಳನ್ನು ಎಷ್ಟು ವಿಧವಾಗಿ ವಿಂಗಡಿಸಬಹುದು ?

೩. 'ಅಣ್ಣ' ಎಂಬ ಶಬ್ದದ ಹಳಗನ್ನಡದ ಎಲ್ಲಾ ವಿಭಕ್ತಿರೂಪಗಳನ್ನೂ ತಿಳಿಸಿ.

೪. ಆಡು ಧಾತುವಿನ ಹಳಗನ್ನಡ ಕ್ರಿಯಾರೂಪಗಳನ್ನು ತಿಳಿಸಿ.

೫. ಈ ಪದಗಳು ಹೇಗೆ ಆಗಿವೆ ?

ಕೆಂಡೇಳು, ಹಡಪಿಗನೊಳ್, ಕುಡಿದಪಂ. ಪಾರಿದಪುದು, ಪಾಡುತ್ತುಂ, ತಣ್ಣೆಳಲಂ.

---

## ೨೫. ವಾಕ್ಯ ವಿಚಾರ

೧. ಪೂರ್ಣವಾದ ಅರ್ಥವನ್ನು ಕೊಡುವ ಮಾತುಗಳ ಗುಂಪಿಗೆ 'ವಾಕ್ಯ' ಎಂದು ಹೆಸರು.

ಉದಾ: ದೇವರು ನಮ್ಮನ್ನು ಕಾಪಾಡಲಿ.

೨. ವಾಕ್ಯದಲ್ಲಿ ಸೇರಿರುವ ಮಾತುಗಳು 'ಪದ' ಅಥವಾ 'ಶಬ್ದ' ಎನಿಸಲ್ಪಡುವುದು.

[ಸೂ: ಮೇಲೆ ಕೊಟ್ಟಿರುವ ವಾಕ್ಯದಲ್ಲಿ ಮೂರು ಪದಗಳಿವೆ.]

ದೇವರು—ನಮ್ಮನ್ನು—ಕಾಪಾಡಲಿ.

೩. ಹೊಂದಿಕೆಯುಳ್ಳ ಅರ್ಥವನ್ನು ಕೊಡುವ ಪದಗಳ ಗುಂಪಿಗೆ **'ಪದಸಮುಚ್ಚಯ'** ಎಂದು ಹೆಸರು.

ಉದಾ: ನನ್ನ ತಮ್ಮನು—ಮಗ್ಗಲು ಮನೆಯಲ್ಲಿ—ಆಟವಾಡುತ್ತಿದ್ದಾನೆ.

(ಸೂ—ಕ್ರಿಯಾಪದವನ್ನು ಬಿಟ್ಟುಳಿದವು ಪದಸಮುಚ್ಚಯಗಳು.)

೪. ಒಂದು ದೊಡ್ಡ ವಾಕ್ಯಕ್ಕೆ ಅಧೀನವಾಗಿರುವ ಪೂರ್ಣಾರ್ಥವಾಗುವ ವಾಕ್ಯವನ್ನು ಉಪವಾಕ್ಯವೆಂದು ಕರೆಯುವರು, ಇದರಲ್ಲಿ ಮೂರು ವಿಧಗಳುಂಟು:—೧) ನಾಮಾತ್ಮಕ ೨) ಗುಣಾತ್ಮಕ ೩) ಕ್ರಿಯಾವಿಶೇಷಾತ್ಮಕ

೧) **ನಾಮಾತ್ಮಕ ಉಪವಾಕ್ಯ**

ಶಂಕರನು ಬುದ್ಧಿವಂತನೆಂಬುದನ್ನು ನಾನು ಬಲ್ಲೆ.

೨) **ಗುಣಾತ್ಮಕ ಉಪವಾಕ್ಯ**

ಸತ್ಯವನ್ನು ಹೇಳುವ ಜನರನ್ನು ಎಲ್ಲರೂ ಪ್ರೀತಿಸುವರು.

೩) **ಕ್ರಿಯಾವಿಶೇಷಾತ್ಮಕ ಉಪವಾಕ್ಯ**

ಮಳೆ ಬರುತ್ತಿದ್ದರೂ ನಾನು ನಡೆದು ಬಂದೆ.

[ಮೇಲಿನ ವಾಕ್ಯಗಳಲ್ಲಿ ಗೀಟು ಹಾಕಿರುವ ಭಾಗಗಳು ಮಾತ್ರ ನಾಮ, ಗುಣ ಮತ್ತು ಕ್ರಿಯೆಗಳನ್ನು ತಿಳಿಸುವ ಉಪವಾಕ್ಯಗಳೆಂಬುದನ್ನು ತಿಳಿಯಬೇಕು.]

## ೨೬. ವಾಕ್ಯಭೇದ

ವಾಕ್ಯಗಳನ್ನು ಶಬ್ದ ಮತ್ತು ಅರ್ಥಗಳ ಅಭಿಪ್ರಾಯಗಳಂತೆ ಬೇರೆ ಬೇರೆ ಭಾಗಗಳಾಗಿ ಹೇಳಬಹುದಾಗಿದೆ.

೧. **ಶಬ್ದಪರ ವಿಭಾಗದಂತೆ**—ಇದು **"ಸಾಮಾನ್ಯ"** **"ಸಂಯೋಜಿತ"** **"ಮಿಶ್ರ"** ವಾಕ್ಯಗಳೆಂದು ಮೂರು ರೀತಿಯಾಗಿದೆ.

ಅ) ಒಂದು ಪೂರ್ಣಕ್ರಿಯೆ ಇರುವ ಸ್ವತಂತ್ರ ವಾಕ್ಯವು **"ಸಾಮಾನ್ಯ ವಾಕ್ಯ"** ಎನಿಸುವುದು.

ಉದಾ:—ಹಕ್ಕಿಯನ್ನು ಪ್ರಾಣಿಯು ತಿಂದಿತು.
ಆಗಲೇ ಗೋಪಾಲ ಮನೆಗೆ ಹೋಗುತ್ತಿದ್ದನು.

ಆ) ಸ್ವತಂತ್ರವಾಗಿರುವ ಎರಡು ಅಥವಾ ಅನೇಕ ಉಪವಾಕ್ಯಗಳು ಸೇರಿ ಒಂದು ವಾಕ್ಯವಾದರೆ ಅದನ್ನು **"ಸಂಯೋಜಿತ ವಾಕ್ಯ"** ಎನ್ನುವರು.

ಉದಾ:—ಅವನು ಕಷ್ಟಪಟ್ಟು ಓದಿದನು, ಆದರೂ ಅವನು ತೇರ್ಗಡೆಯನ್ನು ಹೊಂದಲಿಲ್ಲ. ಈಗ ಎಲ್ಲೆಲ್ಲೂ ಮಳೆಯಾಗಿದೆ, ಆದುದರಿಂದ ರೈತರು ಹೊಲವನ್ನು ಉಳಲು ಹೋಗಿದ್ದಾರೆ.

[ಸೂ:— ಇದರಲ್ಲಿ ಮತ್ತು, ಆದರೆ, ಆದುದರಿಂದ, ಆದಕಾರಣ ಮೊದಲಾದ ಸಂಯೋಜಿತಪದಗಳಿಂದ ಹಲವು ವಾಕ್ಯಗಳು ಸೇರಿಸಲ್ಪಡುತ್ತವೆ.]

ಇ) ಪ್ರಧಾನವಾಕ್ಯವೊಂದಕ್ಕೆ ಒಂದು ಅಥವಾ ಹಲವು ಉಪವಾಕ್ಯಗಳು ಸೇರಿದ್ದರೆ **ಮಿಶ್ರವಾಕ್ಯ**ವಾಗುತ್ತದೆ.

ಉದಾ:—ವಿದ್ಯಾರ್ಥಿಗಳು ಬಹಳ ತಪ್ಪು ಮಾಡುತ್ತಿರುವರು ಎಂಬುದನ್ನು ಉಪಾಧ್ಯಾಯರು ಬಲ್ಲರು.
"ಈಗ ಶಾಂತಿ ಸನ್ನಾಹಗಳು ನಡೆಯುತ್ತಿವೆ." ಎಂದು ಪತ್ರಿಕೆಗಳು ತಿಳಿಸುತ್ತಿವೆ.

೨. **ಅರ್ಥಪರ ವಿಭಾಗದಂತೆ ವಾಕ್ಯಗಳು ನಾಲ್ಕು ವಿಧಗಳಾಗಿರುವುವು.**

**ಅ) ನಿಶ್ಚಯ ಸೂಚಕ:** ಉಂಟು, ಇಲ್ಲ ಎಂಬ ಅರ್ಥವನ್ನು ಸೂಚಿಸುವುವು.

ಉದಾ:—ಗೋಪಾಲನು ಚಾಪೆಯ ಮೇಲೆ ಕುಳಿತಿದ್ದಾನೆ.

**ಆ) ಪ್ರಶ್ನಾರ್ಥಕ:** ಎಲ್ಲಿಗೆ, ಏಕೆ, ಯಾವಾಗ ಇತ್ಯಾದಿ ಪ್ರಶ್ನ ಸೂಚಕಗಳಿಂದ ಕೂಡಿದ ವಾಕ್ಯಗಳು.

ಉದಾ:—ಇಲ್ಲಿಯವರೆಗೆ ನೀನು ಎಲ್ಲಿಗೆ ಹೋಗಿದ್ದೆ ?

**ಇ) ವಿಧ್ಯರ್ಥಕ:** ಆಜ್ಞೆ, ಅರಿಕೆ, ಆಶೀರ್ವಾದಗಳೇ ಮೊದಲಾದ ಅರ್ಥವಿಶೇಷಗಳನ್ನು ಸೂಚಿಸುವುದು.

ಉದಾ:—ಪಾಠವನ್ನು ಓದು.

**ಈ) ಭಾವಸೂಚಕ:** ಸಂಭ್ರಮ, ಆಶ್ಚರ್ಯ, ಸಂತೋಷ, ವ್ಯಸನಾದಿ ಮನೋಭಾವಗಳನ್ನು ಹೊರಸೂಸುವ ವಾಕ್ಯಗಳು.

ಉದಾ;—ಆಹಾ! ಈ ಚಿತ್ರವು ಎಷ್ಟು ಸುಂದರವಾಗಿದೆ.

**ಅಭ್ಯಾಸ ೧೦.**

ಶಬ್ದಪರ ವಿಭಾಗದಂತೆ ಮುಂದೆ ಕೊಟ್ಟಿರುವ ವಾಕ್ಯಗಳು ಯಾವ ಬಗೆಯವು ?

೧. ಗಾಂಧೀಜಿಯವರು ಸ್ವರಾಜ್ಯವನ್ನು ನಮಗೆ ಗಳಿಸಿಕೊಟ್ಟರು.

೨. ಜವಹರರಂತಹ ದೇಶಭಕ್ತರಿರುವಾಗ ನಮಗೆ ಯೋಚನೆಯೇಕೆ ?

೩. ಕನ್ನಡನಾಡಿನಲ್ಲೂ ಬಹಳ ಮಂದಿ ಮುಂದಾಳುಗಳಿರುವರು. ಆದುದರಿಂದ ಕರ್ನಾಟಕ ಏಕೀಕರಣವಾಗುವುದು.

೪. 'ಒಗ್ಗಟ್ಟಿನಲ್ಲಿ ಬಲವಿದೆ' ಎಂಬುದನ್ನು ನೀವು ಬಲ್ಲಿರಲ್ಲವೇ ?

೫. ಕಷ್ಟಪಡಿ; ಜಯವು ತಾನೇ ಲಭಿಸುವುದು.

೬. ಆಹಾ ! ನಮ್ಮ ನಮ್ಮವರೇ ನಮ್ಮ ನಾಡಿನ ಆಡಳಿತ ವಹಿಸಿದರಲ್ಲವೇ ?

## ೨೭. ವಾಕ್ಯಸಂಯೋಜನ

ಹಲವು ವಾಕ್ಯಗಳನ್ನು ಕೂಡಿಸಿ ಒಂದು ವಾಕ್ಯವನ್ನಾಗಿ ಮಾಡುವುದಕ್ಕೆ ವಾಕ್ಯಸಂಯೋಜನ ಅಥವಾ ವಾಕ್ಯಸಂಕಲನ ಎಂದು ಹೆಸರು.

ಉದಾ:— [ಬಿಡಿ ವಾಕ್ಯಗಳು]

ಯುದ್ಧವು ನಡೆಯುತ್ತಿದೆ. ಅನೇಕರು ತೊಂದರೆಪಡುತ್ತಾ ಇದ್ದಾರೆ. ಅವರ ತೊಂದರೆಗಳನ್ನು ದೇವರೇ ಹೋಗಲಾಡಿಸಬೇಕು.

[ಒಟ್ಟುಗೂಡಿಸಿದ ವಾಕ್ಯ]

ಯುದ್ಧವು ನಡೆಯುತ್ತಿರುವುದರಿಂದ ಅನೇಕರು ಪಡುತ್ತಿರುವ ತೊಂದರೆಗಳನ್ನು ದೇವರೇ ಹೋಗಲಾಡಿಸಬೇಕು.

## ೨೮. ಪ್ರತ್ಯಕ್ಷ ಮತ್ತು ಪರೋಕ್ಷ ಕಥನ

ಪರರ ಮಾತಿನ ರೀತಿಯಲ್ಲೇ ಸಂಭಾಷಣೆಯ ಮಾತುಗಳನ್ನು ತಿಳಿಸುವುದಕ್ಕೆ "ಪ್ರತ್ಯಕ್ಷ ಕಥನ" ವೆಂದು ಹೆಸರು. ಇದರ ವಿರುದ್ಧವು [ಮತ್ತೊಬ್ಬರ ಮಾತನ್ನು ಎತ್ತಿ ಹೇಳದಿರುವುದು] "ಪರೋಕ್ಷ ಕಥನವು."

ಉದಾ:— ೧) "ನಾಳೆ ವಾಕ್ಯರಚನೆಯ ಪಾಠವನ್ನು ತಿಳಿಸುವೆನು" ಎಂದು ಉಪಾಧ್ಯಾಯರು ವಿದ್ಯಾರ್ಥಿಗಳಿಗೆ ಹೇಳಿದರು.

೨) ಉಪಾಧ್ಯಾಯರು ವಿದ್ಯಾರ್ಥಿಗಳಿಗೆ ನಾಳೆ ತಾವು ವಾಕ್ಯರಚನೆಯ ಪಾಠವನ್ನು ತಿಳಿಸುವುದಾಗಿ ಹೇಳಿದರು.

### ಅಭ್ಯಾಸ ೧೧.

೧. ಈ ವಾಕ್ಯಗಳನ್ನು ಒಟ್ಟುಗೂಡಿಸಿರಿ :—

ಪಂಪನು ಕನ್ನಡ ಕವಿಗಳಲ್ಲಿ ಪ್ರಸಿದ್ಧನಾದವನು. ಪೊನ್ನನೂ ಪ್ರಸಿದ್ಧನು. ರನ್ನನೂ ಹಾಗೆಯೇ.

೨. ಇದರ ಪರೋಕ್ಷ ಕಥನವೇನು ?

"ದೇವತೆಗಳಲ್ಲಿ ಇಂದ್ರನೂ, ಮಾನವರಲ್ಲಿ ಅರ್ಜುನನೂ ಶೂರರು ಎಂಬುದು ನನಗೆ ಗೊತ್ತು" ಎಂದು ನಾರದರು ಶ್ರೀ ಕೃಷ್ಣನ ಸಭೆಯಲ್ಲಿತಿಳಿಸಿದರು.

೩. ಇದರ ಪ್ರತ್ಯಕ್ಷ ಕಥನವೇನು ?

ಗೋಪಾಲನು ಮುರುಳಿಯ ಬಳಿ ತನ್ನಷ್ಟು ವಿದ್ಯಾವಂತರಾರೂ ಇಲ್ಲವೆಂದು ಹೊಗಳಿಕೊಂಡನು.

---

## ೨೯. ವಾಕ್ಯವಿಭಜನೆ

ವಾಕ್ಯದಲ್ಲಿ ಸೇರಿರುವ ಭಾಗಗಳನ್ನು ವಿಂಗಡಿಸಿ ಅವುಗಳ ಸಂಬಂಧವನ್ನು ತೋರಿಸುವುದಕ್ಕೆ **ವಾಕ್ಯವಿಭಜನೆ** ಎಂದು ಹೆಸರು.

[ವಾಕ್ಯವಿಭಜನೆಯು ಪಟ್ಟಿಯ ರೂಪದಲ್ಲಿರುವುದರಿಂದ ವಿಷಯವು ಸ್ಪಷ್ಟವಾಗಿ ತಿಳಿಯಬರುವುದು.]

ವಾಕ್ಯ:—"ಜಾಣ ಹುಡುಗರು ಕಠಿಣವಾದ ಪಾಠಗಳನ್ನು ಸುಲಭವಾಗಿ ತಿಳಿದುಕೊಳ್ಳಬಲ್ಲರೆಂಬುವನ್ನು ನಾನು ಬಲ್ಲೆನು"

| **ವಾಕ್ಯ** | **ಕರ್ತೃ ವಿಶೇಷಣ** | **ಕರ್ತೃ** | **ಕರ್ಮ ವಿಶೇಷಣ** | **ಕರ್ಮ** |
|---|---|---|---|---|
| ಜಾಣ ಹುಡುಗರು ......ತಿಳಿದುಕೊಳ್ಳಬಲ್ಲರು (ಎಂಬುದನ್ನು)–ಉಪವಾಕ್ಯ | ಜಾಣ | ಹುಡುಗರು [ಉ. ವಾಕ್ಯ] | ಕಠಿಣವಾದ | ಪಾಠಗಳನ್ನು |
| ನಾನು ಬಲ್ಲೆನು–ಪ್ರಧಾನ ವಾಕ್ಯ | | ನಾನು [ಪ್ರ. ವಾಕ್ಯ] | | |

| **ಕ್ರಿಯಾವಿಶೇಷಣ** | **ಕ್ರಿಯೆ** | **ಸಂಬಂಧಸೂಚಕ** |
|---|---|---|
| ಸುಲಭವಾಗಿ | ಬಲ್ಲೆನು | ಎಂಬುದನ್ನು |

[ವಿ. ಸೂ:— ಸಾಧಾರಣವಾಗಿ ವಾಕ್ಯವಿಭಜನೆಯಲ್ಲಿ ಕರ್ತೃ, ಕರ್ಮ, ಕ್ರಿಯೆಗಳ ಹಿಂದೆ ಅವುಗಳ ವಿಶೇಷಣಗಳೂ ಬರುವ ಶಬ್ದಕ್ರಮವನ್ನು ತಿಳಿದಿರಬೇಕು.]

## ಅಭ್ಯಾಸ ೧೨.

ಈ ಕೆಳಗಣ ವಾಕ್ಯಗಳನ್ನು ವಿಭಜನೆಮಾಡಿ :

೧. ವಿದ್ಯಾರಣ್ಯರು ವಿಜಯನಗರರಾಜ್ಯವನ್ನು ಕಟ್ಟಿದರು.

೨. "ಇಂದಿನ ಮಕ್ಕಳೇ ಮುಂದಿನ ಜನಾಂಗ" ಎಂಬುದನ್ನು ಮರೆಯದಿರಿ.

ಸೂಚನೆ :—ಹೀಗೆಯೇ ಹತ್ತನೆಯ ಅಭ್ಯಾಸದಲ್ಲಿರುವ ಪ್ರತಿಯೊಂದು ವಾಕ್ಯವನ್ನೂ ವಿಭಜನೆಮಾಡಿ.

---

## ೨೦. ಛಂದಸ್ಸು

ಪದ್ಯರಚನೆಯನ್ನು ತಿಳಿಸುವ ಶಾಸ್ತ್ರಕ್ಕೆ ಛಂದಶ್ಶಾಸ್ತ್ರವೆಂದು ಹೆಸರು. ಪದ್ಯರಚನೆಯಲ್ಲಿ ಪಾದ, ಗಣ, ಪ್ರಾಸಾದಿಗಳು ಮುಖ್ಯವಾಗಿ ಲಕ್ಷ್ಯದಲ್ಲಿಡತಕ್ಕವು.

**೧. ಪಾದ**--ಪದ್ಯಗಳ ಪ್ರತಿಯೊಂದು ಸಾಲಿಗೂ ಪಾದವೆಂದು ಹೆಸರು. ಕನ್ನಡದಲ್ಲಿ ಮುಖ್ಯವಾಗಿ ಎರಡು ಪಾದಗಳಿಂದ ಹಿಡಿದು ಆರು ಪಾದಗಳ ವರೆಗಿರುವ ಪದ್ಯಗಳನ್ನು ಕಾಣಬಹುದು.

(ದ್ವಿಪದಿ—ಎರಡು ಪಾದಗಳು ; ತ್ರಿಪದಿ—ಮೂರು ಪಾದಗಳು ; ಚೌಪದಿ—ನಾಲ್ಕು ಪಾದಗಳು ; ಷಟ್ಪದಿ—ಆರು ಪಾದಗಳು.)

**೨. ಗಣ**—ಪ್ರತಿಯೊಂದು ಪಾದದ ಅಕ್ಷರಗಳ ಅಥವಾ ಮಾತ್ರೆಗಳ ಗುಂಪಿಗೆ **ಗಣ**ವೆಂದು ಹೆಸರು. ಇದರಲ್ಲಿ ವರ್ಣಗಣ (ವರ್ಣವೃತ್ತ) ಮತ್ತು ಮಾತ್ರಾಗಣ (ಮಾತ್ರಾವೃತ್ತ) ವೆಂಬ ಎರಡು ಭೇದಗಳಿರುವುವು.

೧. ಅಕ್ಷರಗಳ ಎಣಿಕೆಯುಳ್ಳವು ವರ್ಣಗಣಗಳು.

೨. ಮಾತ್ರೆಗಳ ಎಣಿಕೆಯುಳ್ಳವು ಮಾತ್ರಾಗಣಗಳು.

೩. **ಮಾತ್ರೆ**—ಒಂದು ಹ್ರಸ್ವಾಕ್ಷರವನ್ನು ಉಚ್ಚರಿಸಲು ಬೇಕಾಗುವ ಕಾಲಕ್ಕೆ ಮಾತ್ರೆಯೆಂದು ಹೆಸರು. ಮಾತ್ರಾಗಣದಲ್ಲಿ ಲಘು, ಗುರು ಎಂಬೆರಡು ಸಂಕೇತಗಳಿರುವುವು.

ಲಘು (ಚಿಹ್ನೆ ᴗ ) ಒಂದು ಮಾತ್ರೆಯುಳ್ಳದ್ದು.

ಗುರು (ಚಿಹ್ನೆ— ) ಎರಡು ಮಾತ್ರೆಯುಳ್ಳದ್ದು.

ದೀರ್ಘಾಕ್ಷರವೂ, ಅನುಸ್ವಾರ ಮತ್ತು ವಿಸರ್ಗಸಹಿತವಾದುದೂ, ಮತ್ತು ಒತ್ತಕ್ಷರದ ಹಿಂದಿನ ಅಕ್ಷರವೂ ಗುರುಗಳಾಗಿರುವುವು.

೪. **ಪ್ರಸ್ತಾರ**—ಪದ್ಯದ ಗುರು, ಲಘುಗಳನ್ನು ಗುರ್ತಿಸಿ ಮಾತ್ರೆಗಳನ್ನು ಕಂಡುಹಿಡಿದು ಗಣಗಳಾಗಿ ವಿಂಗಡಿಸುವುದಕ್ಕೆ **ಪ್ರಸ್ತಾರ**ವೆಂದು ಹೆಸರು.

**ಪ್ರಾಸ**:—ಪದ್ಯದ ಪ್ರತಿಪಾದದ ಮೊದಲನೆಯ ಮತ್ತು ಎರಡನೆಯ ಸ್ವರಗಳ ನಡುವೆ ಬರುವ ಒಂದೇ ರೀತಿಯ ವ್ಯಂಜನವು **ಪ್ರಾಸ**ವೆನಿಸುವುದು.

## ೩೧. ಕನ್ನಡ ವೃತ್ತಗಳು

ಸಾಧಾರಣವಾಗಿ ಕನ್ನಡ ವೃತ್ತಗಳು ಮಾತ್ರಾಗಣವುಳ್ಳವು. ಅದರಲ್ಲೂ ೩–೪–೫ ಮಾತ್ರೆಗಳ ಗಣಗಳು ಹೆಚ್ಚಾಗಿ ಕಂಡುಬರುವುವು. ಈ ಪದ್ಯಗಳಲ್ಲಿ ದ್ವಿಪದಿ, ತ್ರಿಪದಿ, ಚೌಪದಿ ಮತ್ತು ಷಟ್ಪದಿಗಳು ಪ್ರಸಿದ್ಧವಾದುವು.

೧. **ದ್ವಿಪದಿ**—ಎರಡು ಪಾದಗಳಲ್ಲಿಯೂ ೫ ಮಾತ್ರೆಯ ೩ ಗಣಗಳೂ ಮತ್ತು ೪ ಮಾತ್ರೆಯ ಒಂದು ಗಣವೂ ಇರುವುದು.

೨. **ತ್ರಿಪದಿ**—೩ ಪಾದಗಳಿವೆ. ಇದು ಸಾಮಾನ್ಯವಾಗಿ ೨–೩ ವಿಧಗಳಾಗಿರುವುದು.

೧ನೆಯ ಪಾ—೫ | ೫ | ೫ | ೫ ೫ | ೫ | ೫ | ೫
೨ನೆಯ ಪಾ—೫ | ೩ | ೫ | ೫ ೫ | ೪ | ೪+೧ | ೫
೩ನೆಯ ಪಾ—೫ | ೩ | ೫ ೫ | ೪ | ೪+೧

೩. **ಚೌಪದಿ**—ಇದರಲ್ಲಿ ನಾಲ್ಕು ಸಮಪಾದಗಳಿರುವುವು.

(೧) ೫ ಮಾತ್ರೆಯ ಮೂರು ಗಣ + ೪ ಮಾತ್ರೆಯ ೧ ಗಣ.
(೨) ಮೊದಲಿನ ೩ ಪಾದಗಳು = ೩ | ೪ | ೩ | ೪, ಕೊನೆಯ ಪಾದ = ೩ | ೪ | ೩ | ೧ ಗುರು.

## (ಅ) ಕಂದ

ಇದು ನಾಲ್ಕು ಪಾದಗಳುಳ್ಳದ್ದು. ಇದರಲ್ಲಿ೧–೩, ೨–೪ ಪಾದಗಳು ಸಮಾನವಾದುವು. ೧–೩ ನೆಯ ಪಾದಗಳಲ್ಲಿ ೪ ಮಾತ್ರೆಯ ೩ ಗಣಗಳು. (ಎಂದರೆ ೧೨ ಮಾತ್ರೆಗಳು) ಮತ್ತು ೨–೪ ರಲ್ಲಿ ೪ ಮಾತ್ರೆಯ ೫ ಗಣಗಳು, (ಎಂದರೆ ೨೦ ಮಾತ್ರೆಗಳು) ಬರುವುವು. ೧–೨ ಪಾದಗಳಿಂದ ೮ ಗಣಗಳು ಇರುವುವು. ಇವುಗಳ ಪೈಕಿ ವಿಷಮಗಣಗಳಲ್ಲಿ (೧, ೩, ೫, ೭) ಮಧ್ಯಗುರುವುಳ್ಳ (ಜಗಣ) ಗಣ ಇರಬಾರದು. ಆರನೆಯ ಗಣವು ಜಗಣ. (⏑–⏑) ಅಥವಾ ನಗಣ+೧ ಲಘು (⏑⏑⏑, ⏑) ವಾಗಿರಬೇಕು. ಎಂಟನೆಯ ಗಣದ ಕೊನೆಗೆ ಗುರುವಿರಬೇಕು.

## (ಆ) ಸಾಂಗತ್ಯ

ಇದೂ ಕೂಡ ನಾಲ್ಕು ಪಾದಗಳುಳ್ಳದ್ದು. ೧–೩ ನೆಯ ಪಾದಗಳಲ್ಲಿ ೫ ಮಾತ್ರೆಯ ನಾಲ್ಕು ಗಣಗಳೂ ೨–೪ ರಲ್ಲಿ ಐದು ಮಾತ್ರೆಯ ಎರಡು ಗಣಗಳೂ ಮತ್ತು ೪ ಮಾತ್ರೆಯ ೧ ಗಣವೂ ಬರುವುವು.

೪. **ಷಟ್ಪದಿ**—ಆರು ಪಾದಗಳುಳ್ಳ ಪದ್ಯಕ್ಕೆ ಷಟ್ಪದಿಯೆಂದು ಹೆಸರು. ಇದರಲ್ಲಿ ೧, ೨, ೪, ೫ ನೆಯ ಪಾದಗಳು ಒಂದು ಸಮ. ೩, ೬ ನೆಯ ಪಾದಗಳು ಒಂದು ಸಮ. ಷಟ್ಪದಿಗಳಲ್ಲಿ ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ ಮತ್ತು ವಾರ್ಧಕಗಳೆಂದು ಆರು ಬಗೆಗಳುಂಟು.

**ಬಗೆಗಳು** **(ಲಕ್ಷಣ)**

೧. **ಶರ**—ಚಿಕ್ಕ ಪಾದ—೪ ಮಾತ್ರೆಯ ೨ ಗಣಗಳು
ದೊಡ್ಡ ಪಾದ—೪ ಮಾತ್ರೆಯ ೩ ಗಣಗಳು+೧ ಗುರು

೩. **ಕುಸುಮ**—ಚಿ. ಪಾ.—೫ ಮಾತ್ರೆಯ ೨ ಗಣಗಳು
ದೊ. ಪಾ.—೫ ಮಾತ್ರೆಯ ೩ ಗಣ + ೧ ಗುರು

೩. **ಭೋಗ**—ಚಿ. ಪಾ.—೩ ಮಾ. ೪ ಗ.
ದೊ. ಪಾ.—೩ ಮಾ. ೬ ಗ. + ೧ ಗುರು

೪. **ಭಾಮಿನಿ**—ಚಿಕ್ಕಪಾದ—೩ | ೪ | ೩ | ೪
ದೊ. ಪಾ.—೩ | ೪ | ೩ | ೪ | ೩ | ೪ | + ೧ ಗುರು

೫. **ಪರಿವರ್ಧಿನಿ**—ಚಿ. ಪಾ.—೪ ಮಾತ್ರೆ ೪ ಗಣ
ದೊ. ಪಾ.—೪ ಮಾ. ೬ ಗ. + ೧ ಗುರು

೬. **ವಾರ್ಧಕ**—ಚಿ. ಪಾ.—೫ ಮಾ. ೪ ಗಣ
ದೊ. ಪಾ.—೫ ಮಾ. ೬ ಗ. + ೧ ಗುರು

೫. **ರಗಳೆ**—ಇದರಲ್ಲಿ ಅನೇಕ ಸಾಲುಗಳಿರುವುವು. ಇದಕ್ಕೆ ಪಾದ ನಿಯಮವಿಲ್ಲವಾದರೂ ಪ್ರತಿ ಪಾದವೂ ಒಂದೇ ಸಮನಾಗಿರುವುದು. ಆದಿ, ಮಧ್ಯ, ಅಂತ್ಯದಲ್ಲಿ ಎಲ್ಲಿ ಬೇಕಾದರೂ ಪ್ರಾಸ ಬರಬಹುದು ಇದು ಉತ್ಸಾಹ, ಮಂದಾನಿಲ, ಲಲಿತವೆಂದು ಮೂರು ವಿಧವಾಗಿರುವುದು. ಇವುಗಳ ಲಕ್ಷಣವು ಪ್ರತಿ ಪಾದದಲ್ಲಿಯೂ ಈ ರೀತಿ ಇರುವುದು.

(೧) **ಉತ್ಸಾಹ**—೨ ಅಥವಾ ೩ ಮಾತ್ರೆಯ ೪ ಗಣಗಳು

(೨) **ಮಂದಾನೀಲ**—೪ ಮಾತ್ರೆಯ ೪ ಗಣಗಳು

(೩) **ಲಲಿತ**—೫ ಮಾತ್ರೆಯ ೪ ಗಣಗಳು

# ೩೨. ಹೊಸ ವೃತ್ತಗಳು

**ಭಾವಗೀತೆಗಳು—**

ಆಂಗ್ಲ ಸಾಹಿತ್ಯ ರೀತಿಯಲ್ಲಿ ಕನ್ನಡದಲ್ಲಿ ತಾಳ- ಲಯಗಳನ್ನನುಸರಿಸಿ ಕವಿಸ್ಫೂರ್ತಿಯಿಂದ ಹೊರಹೊಮ್ಮುವ ಭಾವಗಳನ್ನು ಚಿಕ್ಕಚಿಕ್ಕ ಕವನಗಳಲ್ಲಿ ತಿಳಿಸುವುದಕ್ಕೆ ಭಾವಗೀತೆಯೆಂದು ಹೆಸರು.

**೨. ಸರಳರಗಳೆ—**

ಆಂಗ್ಲಭಾಷೆಯ "ಬ್ಲಾಂಕ್ ವರ್ಸ್" ಎಂಬ ವೃತ್ತದಂತೆ ಕನ್ನಡದಲ್ಲಿ ಪ್ರಾಸ ಮತ್ತು ಪಾದಗಳ ನಿರ್ಬಂಧವಿಲ್ಲದೆ ಬರೆಯಲ್ಪಡುವ ಭಾವಪ್ರಧಾನವಾದ ಕವಿತೆಗೆ ಸರಳರಗಳೆಯೆಂಬ ಹೆಸರು ಬಂದಿದೆ. ಇದರಲ್ಲಿ ಸಾಧಾರಣವಾಗಿ ಲಲಿತರಗಳೆಯಂತೆಯೇ ಪ್ರತಿಪಾದದಲ್ಲಿಯೂ ೫ ಮಾತ್ರೆಯ ೪ ಗಣಗಳಿರುವುವು.

# ೩೩. ಸಂಸ್ಕೃತ ವೃತ್ತಗಳು

ಈವೃತ್ತಗಳು ಅಕ್ಷರಗಣಗಳ ನಿಯಮವನ್ನನುಸರಿಸಿರುತ್ತವೆ. ಇದರಲ್ಲಿ ನಾಲ್ಕು ಪಾದಗಳಿರುವುವು. ಮೂರು ಮೂರು ಅಕ್ಷರಗಳಿಗೆ ಒಂದೊಂದು ಗಣವಾಗಿರುವುದು. ಈ ಗಣಗಳು ಗುರು, ಲಘು ವ್ಯತ್ಯಾಸಗಳಿಂದ ಕೆಳಗೆ ಕಂಡಂತೆ ಎಂಟು ರೀತಿಗಳಲ್ಲಿರುವುವು. ( ಗುರು—ಲಘು ⏑ ) ಸೂತ್ರ—"ಯಮಾತಾರಾಜಭಾನಸಲಗಂ"

| ಸಂಖ್ಯೆ | ಗಣದ ಹೆಸರು | ವಿವರ | ಪ್ರಸ್ತಾರ | ಉದಾಹರಣೆ |
|---|---|---|---|---|
| ೧ | ಮಗಣ | ಸರ್ವಗುರು | — — — | ಆನಂದಂ |
| ೨ | ನಗಣ | ಸರ್ವಲಘು | ⏑ ⏑ ⏑ | ಸರಸ |
| ೩ | ಯಗಣ | ಆದಿಲಘು | ⏑ — — | ಕದಂಬಂ |
| ೪ | ರಗಣ | ಮಧ್ಯಲಘು | — ⏑ — | ಬೇಡಿದಂ |

| | | | | |
|---|---|---|---|---|
| ೫ | ತಗಣ | ಅಂತ್ಯಲಘು | — — ᴗ | ಪಾಂಡಿತ್ಯ |
| ೬ | ಭಗಣ | ಆದಿಗುರು | — ᴗ ᴗ | ಶಂಕರ |
| ೭ | ಜಗಣ | ಮಧ್ಯಗುರು | ᴗ — ᴗ | ಸ್ವರಾಜ್ಯ |
| ೮ | ಸಗಣ | ಅಂತ್ಯಗುರು | ᴗ ᴗ — | ಬರುವೆಂ |

ಸಂಸ್ಕೃತ ವೃತ್ತಗಳು ಪ್ರತಿ ಛಂದಸ್ಸಿನಲ್ಲೂ ಬಹಳವಾಗಿವೆ. ಕನ್ನಡದಲ್ಲಿ ಆರು ವಿಧ ವೃತ್ತಗಳು ಹೆಚ್ಚಾಗಿ ಬಳಕೆಯಲ್ಲಿರುವುದರಿಂದ ಅವುಗಳ ಲಕ್ಷಣಗಳನ್ನು ಮಾತ್ರ ಮುಂದೆ ಕೊಡಲಾಗಿದೆ.

೬ ವಿಧ ಸಮವೃತ್ತಗಳು—೧)**ಉತ್ಪಲಮಾಲೆ ೨)ಶಾರ್ದೂಲವಿಕ್ರೀಡಿತ ೩) ಸ್ರಗ್ಧರೆ ೪) ಮಹಾಸ್ರಗ್ಧರೆ ೫) ಮತ್ತೇಭವಿಕ್ರೀಡಿತ ೬) ಚಂಪಕಮಾಲೆ.**

## ವೃತ್ತಲಕ್ಷಣ

ಲಕ್ಷ್ಯ ಲಕ್ಷಣಗಳೆರಡನ್ನೂ ಆಯಾ ವೃತ್ತಗಳ ಸೂತ್ರಗಳಲ್ಲಿ ಮುಂದೆ ತಿಳಿಸಲಾಗಿದೆ.

೧. **ಉತ್ಪಲಮಾಲೆ**—(೨೦ ಅಕ್ಷರಗಳು)

ಸೂ—ಉತ್ಪಲ । ಮಾಲೆಯ । ಪ್ಪದುಭ । ರಂಸಭ । ಭಂರಲ । ಗಂನೆಗ । ಳ್ದಿರಲ್ ।

—ᴗᴗ। —ᴗ—। ᴗᴗᴗ। —ᴗᴗ। —ᴗᴗ। —ᴗ—। ᴗ—।

೨. **ಶಾರ್ದೂಲವಿಕ್ರೀಡಿತ**—(೧೯ ಅಕ್ಷರಗಳು)

ಕಣ್ಗೊಪ್ಪಲ್ ಮಸಜಂ ಸತಂತಗಮು ಮಾಶಾರ್ದೂಲವಿಕ್ರೀಡಿತಂ

— — —। ᴗᴗ—। ᴗ—ᴗ। ᴗᴗ—। — —ᴗ। — —ᴗ। —।

೩. **ಸ್ರಗ್ಧರೆ**—(೨೧ ಅಕ್ಷರಗಳು)

ತೋರಲ್ ಮಂರಂಭನಂ ಮೂಯುಗಣಮುಮದೆ ತಾಂ ಸ್ರಗ್ಧರಾವೃತ್ತಮಕ್ಕುಂ ।

— — —।—ᴗ—।—ᴗᴗ। ᴗᴗᴗ। ᴗ— —।ᴗ— —।ᴗ— —।

೪. **ಮಹಾಸ್ರಗ್ಧರೆ**—(೨೨ಅಕ್ಷರಗಳು)

ಸತತಂ ಸಂಸಂರರಂಗಂ ನೆರೆವೆಸೆಯೆ ಮಹಾಸ್ರಗ್ಧರಾವೃತ್ತಮುಕ್ಕುಂ ।

UU–| – – U| – –U| U U U| U U –| –U–| –U–| –|

೫. **ಮತ್ತೇಭ ವಿಕ್ರೀಡಿತ**–(೨೦ ಅಕ್ಷರಗಳು)

ಸಭರಂನಂ ಮಯಲಂಗಮುಂ ಬಗೆಗೊಳಲ್ ಮತ್ತೇಭ ವಿಕ್ರೀಡಿತಂ

UU—| —UU| —U—| UUU| — — —| U— —| U —|

೬. **ಚಂಪಕಮಾಲೆ**-(೨೧ ಅಕ್ಷರಗಳು)

ನಜಭಜಜಂಜರಂ ಬಗೆಗೊಳುತ್ತಿರೆ ಚಂಪಕಮಾಲೆ ಪುಟ್ಟುಗುಂ

UUU| U—U| —UU| U—U| U—U| U—U| U—U| —U—|

## ೩೪. ಅಲಂಕಾರಗಳು

ಅಲಂಕಾರಗಳು ಕಾವ್ಯಕ್ಕೆ ಸೌಂದರ್ಯವನ್ನು ತರುವುವು. ಶಬ್ದರಚನೆಯಿಂದ ಕಾವ್ಯದ ಸೌಂದರ್ಯವು ಹೆಚ್ಚಿದರೆ ಶಬ್ದಾಲಂಕಾರವೆಂದೂ, ಅರ್ಥಸ್ವಾರಸ್ಯವಿದ್ದರೆ ಅರ್ಥಾಲಂಕಾರವೆಂದೂ ಹೆಸರು. ಹೀಗೆ ಮುಖ್ಯವಾಗಿ ಶಬ್ದ ಮತ್ತು ಅರ್ಥಪ್ರಧಾನವಾದ ಎರಡು ವಿಧ ಅಲಂಕಾರಗಳಿರುವುವು. ಇವುಗಳ ಸ್ಥೂಲಪರಿಚಯವನ್ನು ಮುಂದೆ ಕೊಟ್ಟಿದೆ.

(ಅ) **ಶಬ್ದಾಲಂಕಾರಗಳು:**—

ಇದರಲ್ಲಿ **ಯಮಕ** ಮತ್ತು **ಅನುಪ್ರಾಸ**ವೆಂದು ಎರಡು ವಿಧಗಳುಂಟು.

೧. **ಯಮಕ**–ಪದ್ಯದ ಆದಿ ಮಧ್ಯಾಂತ್ಯಗಳಲ್ಲಿ ಸ್ವರ, ವ್ಯಂಜನಗಳಿಂದ ಕೂಡಿದ ಅಕ್ಷರಗಳು ಅನೇಕಕಡೆ ಆವೃತ್ತಿಯಾದರೆ **ಯಮಕ** ವೆನಿಸುವುದು.

ಉದಾ:—ಸುರಪತಿಸುತಶರವರ್ಷಂ । ಸುರತರುನವಕುಸುಮವರ್ಷಂ........ .......ದೃಗ್ಜಲವರ್ಷಂ

೨. **ಅನುಪ್ರಾಸ**–ಪದ್ಯದ ಹಲವೆಡೆ ಬಂದ ಅಕ್ಷರಗಳೇ ಬಂದರೆ **ಅನುಪ್ರಾಸವು.**

ಉದಾ:—ಹರಿಯನಲ್ಲಿಯೆ ನಿಲ್ಲಿಸಿ ಹರಿತಂದು ಹರಿಣನಂ ಬೆಂಬತ್ತಿ ಬರಲಾ–ಹರಿಯನೇ ಜಪಿಸುತಳುತಿಹ ಬಾಲನಂ ಕಂಡು.

**(ಅ) ಅರ್ಥಾಲಂಕಾರಗಳು:—**

ಅರ್ಥಾಲಂಕಾರಗಳು ೧೨೦ ರ ಮೇಲಿವೆ. ಅವುಗಳಲ್ಲಿ ಕನ್ನಡಕ್ಕೆ ಈಚಿನ ಸಾಹಿತಿಗಳು ೬೪ ಪ್ರಸಿದ್ಧ ಅಲಂಕಾರಗಳನ್ನಿಟ್ಟುಕೊಂಡರೆ ಸಾಕೆಂದು ತಿಳಿಸುವರು. ಆದರೆ ಇವುಗಳ ಪೈಕಿ ವಿದ್ಯಾರ್ಥಿಗಳಿಗೆ ಪ್ರಾರಂಭದಲ್ಲಿ ಕೆಲವು ಅಲಂಕಾರಗಳ ಪರಿಚಯವಾದರೂ ಇರಬೇಕು.

I

೧. **ಉಪಮೆ**—ಎರಡು ವಸ್ತುಗಳಿಗೆ ಸುಂದರಹೋಲಿಕೆ ತಿಳಿಸುವುದು. ಇದರಲ್ಲಿ ಉಪಮಾನ, ಉಪಮೇಯ, ಸಮಾನಧರ್ಮ ಮತ್ತು ಉಪಮಾವಾಚಕ ಎಂಬ ನಾಲ್ಕು ಮುಖ್ಯ ವಿಷಯಗಳನ್ನು ಗಮನಿಸಬೇಕು.

ಯಾವುದನ್ನು ಹೋಲಿಸುತ್ತೇವೆಯೋ ಅದು **ಉಪಮಾನ,** ಯಾವುದಕ್ಕೆ ಹೋಲಿಸುತ್ತೇವೆಯೋ ಅದು **ಉಪಮೇಯ.** ಹೋಲಿಕೆಯಾಗುವ ಧರ್ಮವು **ಸಮಾನಧರ್ಮ.** ಹೋಲಿಕೆಯನ್ನು ಸೂಚಿಸುವ **'ಅಂತೆ', 'ವೊಲ್', 'ಹಾಗೆ'** ಮುಂತಾದ ಪದಗಳು **ಉಪಮಾವಾಚಕಗಳು.**

ಉದಾ:– "ಸುದಕ್ಷಿಣೆಯ ಮುಖವು ಕಮಲದಂತೆ ಸುಂದರವಾಗಿತ್ತು." (ಸುದಕ್ಷಿಣೆಯ ಮುಖವು=ಉಪಮೇಯ, ಕಮಲದಂತೆ=ಉಪಮಾನ, ಸುಂದರ=ಸಮಾನಧರ್ಮ, ಅಂತೆ=ಉಪಮಾಸೂಚಕಪದ )

೨. **ಉತ್ಪ್ರೇಕ್ಷೆ**–ಒಂದು ವಸ್ತುವನ್ನು ಮತ್ತೊಂದು ವಸ್ತುವಾಗಿ ಊಹಿಸುವುದು (ಸಂಭಾವನೆ ಮಾಡುವುದು) ಉತ್ಪ್ರೇಕ್ಷೆಯು. ಉಪಮೆಯಲ್ಲಿ ಹೋಲಿಕೆಯು ಸಹಜವಾಗಿಯೂ, ಇಲ್ಲಿ ಕವಿಕಲ್ಪನೆಯಿಂದ ಕೂಡಿಯೂ ಇರುತ್ತದೆ.

ಉದಾ:–"ಸೌಭರಿಯು ಸುಡದಿರುವ ಅಗ್ನಿಯೋ ಎಂಬಂತೆ ಇದ್ದನು" (ಎಂಬಂತೆ, ಎನೆ, ವೋಲ್–ಇವು ಸಂಭಾವನೆಯನ್ನು ಸೂಚಿಸುವ ಶಬ್ದಗಳು.)

೩. **ರೂಪಕ**—ಉಪಮೇಯವೇ ಉಪಮಾನವೆಂದು ವರ್ಣಿಸುವುದು ರೂಪಕವಾಗುವುದು. ರೂಪಣವೆಂದರೆ ಒಂದು ವಸ್ತುವನ್ನು ಇನ್ನೊಂದರಲ್ಲಿ ಆರೋಪಿಸುವುದು,

ಉದಾ:– ಭೀಮನ ಕೋಪಾಗ್ನಿಗೆ ನರರಾಕ್ಷಸನು ಆಹುತಿಯಾದನು.

೪. **ದೃಷ್ಟಾಂತ**—ಉಪಮಾನ, ಉಪಮೇಯ ವಾಕ್ಯಗಳಲ್ಲಿ ಧರ್ಮವು ಬೇರೆಬೇರೆಯಾಗಿದ್ದರೂ ಅರ್ಥದ ಹೋಲಿಕೆಯಿಂದ ಬಿಂಬ ಪ್ರತಿಬಿಂಬ ದಂತಿದ್ದರೆ ದೃಷ್ಟಾಂತವು.

ಉದಾ:–ಮನೆಯ ಕಾಮಧೇನುವನ್ನು ಬಿಟ್ಟು ಅಡವಿಯ ಸಿಂಹವನ್ನು ಹುಡುಕಿಕೊಂಡು ಹೋಗುವುದೇ? ಶ್ರೀ ಕೃಷ್ಣ ಪರಮಾತ್ಮನೇ ಇರುವಲ್ಲಿ ಅಶ್ವಮೇಧವೇಕೆ?

೫. **ಸಮಾಸೋಕ್ತಿ**— ಪ್ರಸ್ತುತ ವಿಚಾರದಿಂದ ಅಪ್ರಸ್ತುತವಾದ ಬೇರೊಂದು ಸಂಗತಿಯು ಸೂಚಿತವಾಗುವುದು ಸಮಾಸೋಕ್ತಿಯು.

ಉದಾ:–ಶರಾವತಿಯು ಕುಣಿಯುತ್ತಲೂ, ಓಡುತ್ತಲೂ, ಧುಮುಕುತ್ತಲೂ ಹರಿಯುವಳು (ನದಿಯ ವರ್ಣನೆಯಿಂದ ಬೇರೊಬ್ಬ ಸ್ತ್ರೀ ವೃತ್ತಾಂತವೂ ಸೂಚಿತವಾಗುವುದು.)

೬. **ಸ್ವಭಾವೋಕ್ತಿ**—ವಸ್ತುಗಳ ಜಾತಿ, ಗುಣ, ಕ್ರಿಯೆಗಳಿಗೆ ಸಂಬಂಧಪಟ್ಟ ಸ್ವೈಜಗುಣಗಳನ್ನು ತಿಳಿಸುವುದು ಸ್ವಭಾವೋಕ್ತಿ.

ಉದಾ:—ಅಭಿಮನ್ಯುವು ಅರ್ಧಮುಚ್ಚಿದ ಕಣ್ಣುಗಳಿಂದಲೂ, ಅರಳಿದ ಮುಖದಿಂದಲೂ, ಕತ್ತರಿಸಿದ ಕೈಗಳಿಂದಲೂ ರಣಭೂಮಿಯಲ್ಲಿ ಮಲಗಿದ್ದನು.

## II

ಸ್ಥಳ ಸಂಕೋಚದಿಂದ ಮುಂದೆ ಕೆಲವು ಅಲಂಕಾರಗಳ ಹೆಸರುಗಳನ್ನು ಮಾತ್ರ ತಿಳಿಸಿ, ಅವು ಬರುವ ಸಂದರ್ಭಗಳನ್ನೂ ಅದರೊಂದಿಗೆ ಕೊಟ್ಟಿರುತ್ತದೆ.

೧. **ಅತಿಶಯೋಕ್ತಿ**—ಪ್ರಸಿದ್ಧ ವಿಚಾರಗಳನ್ನು ಅತಿಶಯವಾಗಿ ಅಥವಾ ಕಡಿಮೆಯಾಗಿ ತಿಳಿಸುವುದು.

೨. **ಪ್ರದೀಪ**—ಉಪಮೇಯವೇ ಉಪಮಾನವಾಗುವುದು.

೩. **ದೀಪಕ**—ವರ್ಣ್ಯಾವರ್ಣ್ಯಗಳಲ್ಲಿ ಒಂದೇ ಧರ್ಮವಿರುವುದು.

೪. **ಅರ್ಥಾಂತರನ್ಯಾಸ**—ಪ್ರಸ್ತುತ ಮತ್ತು ಅಪ್ರಸ್ತುತ ವಿಚಾರಗಳ ಸಮರ್ಥನೆಯಲ್ಲಿ ಒಂದರಿಂದ ಮತ್ತೊಂದು ತೋರುವುದು.

೫. **ಅಪ್ರಸ್ತುತ ಪ್ರಶಂಸೆ**— ಅಪ್ರಸ್ತುತ ವಿಚಾರದಿಂದ ಪ್ರಸ್ತುತ ಸಂಗತಿಯು ಸೂಚಿತವಾಗುವುದು.

೬. **ವಿರೋಧಾಭಾಸ**—ವಿರೋಧವಾದ ಮಾತಿನಿಂದ ಅವಿರೋಧವು ತಿಳಿಯುವುದು.

೭. **ಶ್ಲೇಷೆ**— ಶಬ್ದದಿಂದ ಅನೇಕಾರ್ಥ ಸೂಚನೆಯಾಗುವುದು.

೮. **ಉಲ್ಲೇಖ**—ಒಂದೇ ವಸ್ತುವನ್ನು ಅನೇಕ ಪ್ರಕಾರ ಹೇಳುವುದು.

೯. **ವಿಭಾವನಾ**—ಕಾರಣವಿಲ್ಲದಿದ್ದರೂ ಕಾರ್ಯ ನಡೆಯುವುದು ಎಂದು ಹೇಳುವುದು.

೧೦. **ಅತ್ಯುಕ್ತಿ**— ಅದ್ಭುತವಾಗಿಯೂ, ಅಸಂಭವವಾಗಿಯೂ ವಿಷಯಗಳನ್ನು ವಿವರಿಸುವುದು.

## ೩೫. ಕಾವ್ಯಲಕ್ಷಣ ಮತ್ತು ಭೇದಗಳು

### ೧. ಕಾವ್ಯ ಲಕ್ಷಣ

ರಸಾತ್ಮಕವಾಗಿದ್ದು ಜನಸಾಮಾನ್ಯಕ್ಕೆ ಹೃದಯಾನಂದವನ್ನುಂಟು

ಮಾಡುವ, ದೋಷರಹಿತವಾದ ಮತ್ತು ಗುಣಾಲಂಕಾರದಿಂದ ಕೂಡಿರುವ ಶಬ್ದಾರ್ಥಗಳೇ ಕಾವ್ಯವೆನಿಸುವುದು.

ಶಬ್ದರೂಪವಾದ ಗ್ರಂಥಗಳು ಕಾವ್ಯ ಮತ್ತು ಶಾಸ್ತ್ರಗಳೆಂದು ಎರಡು ಬಗೆಗಳಾಗಿವೆ. ಜನಸಾಮಾನ್ಯಕ್ಕೆ ಸಂತೋಷವನ್ನುಂಟುಮಾಡುವುದೇ **ಕಾವ್ಯದ** ಗುರಿಯು; ಆದರೆ ತತ್ವವಿಚಾರವನ್ನು ಬೋಧಿಸುವುದು **ಶಾಸ್ತ್ರದ** ಲಕ್ಷ್ಯವು.

## ೨. ಕಾವ್ಯ ಭೇದ

ಕಾವ್ಯವು ಗದ್ಯ, ಪದ್ಯ, ಚಂಪೂ ಮತ್ತು ನಾಟಕಾದಿ ರೂಪಗಳಲ್ಲಿವೆ. ಕನ್ನಡ ಕಾವ್ಯ ವ್ಯಾಸಂಗಕ್ಕೆ ಇವುಗಳ ಸ್ಥೂಲ ಸ್ವರೂಪವನ್ನಾದರೂ ತಿಳಿಯುವುದು ಅತ್ಯಗತ್ಯವು.

**ಪದ್ಯವು** ಛಂದೋಬದ್ಧವಾದ ಪಾದ, ಗಣ ಪ್ರಾಸಾದಿ ನಿಯಮಗಳಿಂದ ಕೂಡಿರುವುದು. ಈ ನಿಯಮಕ್ಕೆ ಸಿಕ್ಕದೆ ವಚನರೂಪದಲ್ಲಿರುವುದು **ಗದ್ಯವು.** ಗದ್ಯ ಮತ್ತು ಪದ್ಯಗಳೆರಡೂ ಮಿಶ್ರವಾಗಿರುವ ಗ್ರಂಥಗಳು **ಚಂಪೂ** ಕಾವ್ಯಗಳು. ಅಭಿನಯದ ಸಹಾಯದಿಂದ ಪ್ರದರ್ಶಿಸಲ್ಪಡಬಹುದಾದ ಕಾವ್ಯಗಳು **ನಾಟಕಗಳು** ಅಥವಾ ನಾಟಕಾದಿ ರೂಪಕಗಳು.

ವಸ್ತು-ನಾಯಕ-ರಸ-ಇವುಗಳ ಭೇದದಿಂದ ನಾಟಕಾದಿ ದಶರೂಪಕಗಳಿವೆ. ಇವುಗಳ ಜೊತೆಗೆ ಹದಿನೆಂಟು ಉಪರೂಪಕಗಳೂ ಇವೆ. ರೂಪಕಗಳು ಮಂಗಳದಲ್ಲಿ (ಅಥವಾ ಸಂತೋಷದಿಂದ) ಕೊನೆಗೊಂಡಿದ್ದರೆ ಅವುಗಳನ್ನು ಸುಖಾಂತವೆಂದೂ, ವ್ಯಸನ ವಿಷಾದಗಳಿಂದ ಕೂಡಿದ್ದರೆ ವಿಷಾದಾಂತ (ದುಃಖಾಂತ ಅಥವಾ ರುದ್ರನಾಟಕ) ವೆಂದೂ ವ್ಯವಹರಿಸಲ್ಪಡುವುವು.

**ಹತ್ತು ರೂಪಕಗಳು—**

೧. ನಾಟಕ  ೨. ಪ್ರಕರಣ  ೩. ಭಾಣ  ೪. ಪ್ರಹಸನ

೫. ಡಿಮ ೬. ವ್ಯಾಯೋಗ ೭. ಸಮವಾಕಾರ ೮. ವೀಧಿ ೯. ಅಂಕ ೧೦. ಈಹಾಮೃಗ.

## ೩. ಕಾವ್ಯಶ್ರೇಷ್ಠತೆ

ಶಬ್ದಾರ್ಥಗಳ ಸ್ವರೂಪ ಮತ್ತು ಗುಣಗಳ ಮೇಲೆ ಕಾವ್ಯದ ಯೋಗ್ಯತೆ ಮತ್ತು ಶ್ರೇಷ್ಠತೆಗಳು ಗೊತ್ತಾಗುವುವು. ಪ್ರಾಣಿ ಮತ್ತು ವಸ್ತುಗಳನ್ನು ಸತ್ವ, ರಜಸ್ಸು ಮತ್ತು ತಮಸ್ಸು ಎಂಬ ಗುಣತ್ರಯಗಳಾಗಿ ವಿಭಾಗಿಸುವಂತೆ ಕಾವ್ಯಗಳನ್ನೂ ಅವುಗಳಲ್ಲಿ ತೋರಿಬರುವ ವಾಚ್ಯ, ಲಕ್ಷ್ಯ ಮತ್ತು ವ್ಯಂಗ್ಯಗಳೆಂಬ ಅರ್ಥಕ್ರಮದ ಗುಣಾನುಸಾರವಾಗಿ ಉತ್ತಮ, ಮಧ್ಯಮ ಮತ್ತು ಅಧಮ ಕಾವ್ಯಗಳೆಂದು ಮೂರು ವಿಧಗಳಾಗಿ ವಿಂಗಡಿಸುವರು. ಅರ್ಥಕೊಡುವ ಶಬ್ದಗಳು ಕ್ರಮವಾಗಿ **ವಾಚಕ, ಲಕ್ಷಕ, ವ್ಯಂಜಕಗಳು**. ಇವುಗಳ ಸಾಮರ್ಥ್ಯಕ್ಕೆ ಅಭಿಧಾವೃತ್ತಿ, ಲಕ್ಷಣಾವೃತ್ತಿ ಮತ್ತು ವ್ಯಂಜನಾವೃತ್ತಿ ಎಂಬ ಕ್ರಮವಾದ ಹೆಸರುಗಳಿವೆ.

(೧) ಕಾವ್ಯದಲ್ಲಿ ವಾಚ್ಯಕಿಂತಲೂ ವ್ಯಂಗ್ಯಾರ್ಥವೇ ಹೆಚ್ಚಾಗಿದ್ದರೆ ಆ ಕಾವ್ಯವು **ಧ್ವನಿಕಾವ್ಯ** ಅಥವಾ **ಉತ್ತಮ** ಕಾವ್ಯವಾಗುವುದು.

(೨) ವ್ಯಂಗ್ಯಾರ್ಥಕ್ಕಿಂತ ವಾಚ್ಯವೇ ಅಧಿಕವಾಗಿದ್ದರೆ ಗುಣೀಭೂತ ವ್ಯಂಗ್ಯ ಅಥವಾ **ಮಧ್ಯಮ** ಕಾವ್ಯವಾಗುವುದು.

(೩) ವ್ಯಂಗ್ಯಾರ್ಥವೇ ಇಲ್ಲದಿರುವ ಕಾವ್ಯಗಳು ಚಿತ್ರ ಅಥವಾ **ಅಧಮ** ಕಾವ್ಯವಾಗುವುದು.

## ಕಾವ್ಯ ಪ್ರಯೋಜನ

ಕಾವ್ಯದಿಂದ ಯಶಸ್ಸು, ಧನ, ಲೋಕವ್ಯವಹಾರಜ್ಞಾನ, ಅಮಂಗಳಪರಿಹಾರ, ಕಾಂತಾಸಮ್ಮಿತವಾದ ಉಪದೇಶ ಮತ್ತು ಪರಮಾನಂದಗಳು ಲಭಿಸುತ್ತವೆ. (ಲಕ್ಷಣಶಾಸ್ತ್ರಾಧಾರ)

## ೫. ಕಾವ್ಯ ಸೌಂದರ್ಯ

ಉತ್ತಮ ಕಾವ್ಯವನ್ನೋದುವುದರಿಂದ, ಯಾವುದೋ ಒಂದು ಬಗೆಯ ಹರ್ಷ, ಸಂತೋಷ, ಆನಂದವನ್ನು ಅನುಭವಿಸುತ್ತೇವೆ. ಆ ವಿಧವಾದ ಆನಂದಾನುಭವವೇ ಅಲಂಕಾರಶಾಸ್ತ್ರದಲ್ಲಿ ಕಾವ್ಯದ **'ವ್ಯಂಗ್ಯ'** ಅಥವಾ **'ರಸ'** ಎಂಬ ಮಾತಿನಿಂದ ವ್ಯವಹರಿಸಲ್ಪಡುವುದು. ರಸದಿಂದ ಕಾವ್ಯಕ್ಕೆ ಸೌಂದರ್ಯವು ಬರುವುದರಿಂದ ಅಭ್ಯಾಸಿಗಳಿಗೆ ಸ್ಥೂಲವಾಗಿ ಇದರ ಪರಿಚಯ ಮಾಡಿಕೊಡಲೆತ್ನಿಸಿದೆ.

ವಿ. ಸೂ:-ರಸವಿಚಾರವು ಬಹಳ ಗಹನವಾದುದು. ಶಾಸ್ತ್ರಪ್ರಯೋಗಗಳಿಂದಲೇ ಇದಕ್ಕೆ ಸರಿಯಾದ ಅರ್ಥವು ಪ್ರಸಿದ್ಧವಾಗುವುದಾದರೂ ಇದನ್ನು ಬಿಟ್ಟು ಕಾವ್ಯವ್ಯಾಸಂಗ ಮಾಡುವುದರಿಂದ ಪ್ರಯೋಜನವಿಲ್ಲ.

ಕವಿಗಳು ಕಾವ್ಯವನ್ನು ದೇಹಕ್ಕೆ ಹೋಲಿಸಿ ಹೇಳುವರು. ರಸವೇ ಕಾವ್ಯದ ಆತ್ಮ ಮಾರ್ಗ, ರೀತಿ, ಪಾಕ ಇಯ್ಯಾದಿಗಳು ಅವಯವಗಳು. ಶಬ್ದಾರ್ಥ ಅಲಂಕಾರಗಳು ಇವು-ಆಭರಣಗಳು ಕಾವ್ಯರೀತಿಯಿಂದ ಹೇಳುವ ಮಾತುಗಳು. ಇದನ್ನೇ ಈಗಿನವರು ವ್ಯವಹಾರದಲ್ಲಿ ಬೇರೆ ಬೇರೆ ಮಾತುಗಳಿಂದಕರೆಯುವರೆನ್ನಬಹುದು.

೧) ರಸ=ಚಮತ್ಕಾರಾರ್ಥ, ವ್ಯಂಗ್ಯಾರ್ಥ. ೨) ಮಾರ್ಗ=ಬರೆವ ಕ್ರಮ.
೩) ರೀತಿ=ಶೈಲಿ ೪) ಪಾಕ=ಸುಲಭಾರ್ಥರೀತಿ.
೫) ಶಯ್ಯೆ=ಪದಮೈತ್ರಿ. ೬) ಲಾಲಿತ್ಯ=ಓಜಸ್ಸು. ಪ್ರಸಾದ, ಮಾಧುರ್ಯಾದಿ ಗುಣಗಳು. ಪ್ರಕೃತಾರ್ಥ ವಿವರಣೆ ಮತ್ತು ಶುದ್ಧಪದರೀತಿ ಮುಂತಾದವು.
೭) ಅಲಂಕಾರ=ಶಬ್ದಾರ್ಥ ಚಮತ್ಕಾರಗಳು. (ಹೀಗೆಯೇ ಇತರ ವಿಷಯಗಳು)

ಸೂ:—ಆದರೆ ಇಲ್ಲಿ ಕೊಟ್ಟಿರುವ ಸ್ಥೂಲಾರ್ಥವನ್ನು ಮೇಲ್ಕಂಡ ಶಬ್ದಗಳ ವ್ಯಾಖ್ಯಾನಗಳೆಂದು ತಿಳಿಯಕೂಡದು.

ಮೊದಲೇ ಹೇಳಿದಂತೆ ಕಾವ್ಯಕ್ಕೆ ಸೌಂದರ್ಯವುಂಟಾಗಲು ದೋಷರಾಹಿತ್ಯವೂ ಶಬ್ದಾರ್ಥಗುಣಗಳೂ ಮತ್ತು ಅಲಂಕಾರಗಳೂ ಕಾರಣಗಳೆಂಬುದನ್ನು ಮರೆಯಬಾರದು.

## ೩೬. ರಸವಿಚಾರ

ಕಾವ್ಯವನ್ನು ಓದುವುದರಿಂದಾಗಲೀ, ಪ್ರಕೃತಿ ದೃಶ್ಯವನ್ನೋ, ನಾಟಕಾದಿ ದೃಶ್ಯಗಳನ್ನೋ ಅಥವಾ ಯಾವುದಾದರೂ ಸುಂದರರೂಪವನ್ನೋ ನೋಡುವುದರಿಂದಾಗಲೀ ಆಗುವ ಆನಂದವನ್ನು ಚಿತ್ತವಿಕಾಸವೆನ್ನುವರು. ಇಂತಹ ಚಿತ್ತವಿಕಾಸವಾಗಲೀ ಅಥವಾ ಚಿತ್ತವಿಕಾರವಾಗಲೀ **'ಭಾವ'** ಎನ್ನಲ್ಪಡುವುದು. ಈ ಭಾವಗಳು ನೀರಿನ ಅಲೆಗಳಂತೆ ಕೆಲವು ಚಿಕ್ಕವೂ, ಕೆಲವು ದೊಡ್ಡವೂ ಆಗಿದ್ದು, ಅಲಂಕಾರಶಾಸ್ತ್ರದಲ್ಲಿ ಬೇರೆಬೇರೆ ಹೆಸರಿನಿಂದ ಕರೆಯಲ್ಪಡುತ್ತವೆ.

ಇವುಗಳಲ್ಲಿ ದೊಡ್ಡಭಾವವೆನಿಸಲ್ಪಡುವ ಮತ್ತು ಸ್ಥಿರವಾಗಿ ನಿಲ್ಲುವ "ಸ್ಥಾಯೀಭಾವವು" ಕ್ರಮವಾಗಿ ವೃದ್ಧಿಹೊಂದಿ **ರಸ**ವೆನಿಸುವುದು. ರತಿ, ವಿನೋದ, ಶೋಕ ಮೊದಲಾದ ಒಂಭತ್ತು ವಿಧವಾದ ಸ್ಥಾಯೀಭಾವಗಳಿಗೆ ಅನುಕ್ರಮವಾಗಿ ಶೃಂಗಾರ, ಹಾಸ್ಯ, ಕರುಣಾದಿ ಒಂಭತ್ತು (ನವ) ವಿಧ ರಸಗಳಿರುವುವು.

**ನವರಸಗಳು**—೧) ಶೃಂಗಾರ ೨) ವೀರ ೩) ಕರುಣ ೪) ಅದ್ಭುತ ೫) ಹಾಸ್ಯ ೬) ರೌದ್ರ ೭) ಭಯಾನಕ ೮) ಬೀಭತ್ಸ ೯) ಶಾಂತ

---

# ಮೈಸೂರು ಎಸ್. ಎಸ್. ಎಲ್. ಸಿ. ಪರೀಕ್ಷೆಯ ಪ್ರಶ್ನಪತ್ರಿಕೆ.

(ವ್ಯಾಕರಣ ಭಾಗ ಮಾತ್ರ)

## 1945

1) ಪ್ರಕೃತಿಭಾವ, ಸಮಾಹಾರ ದ್ವಿಗು, ರೂಪನಿಷ್ಪತ್ತಿ, ವಾಕ್ಯವಿಭಜನೆ ಎಂದರೇನು?

2) ಅಕ್ಕರಗೊಟ್ಟಿ, ಕೊಂಬವರ್, ತಂಗಾಳಿ, ಕಟ್ಟಾಣಿ, ಉಡುಗೊರೆ— ಈ ಪದಗಳು ಹೇಗೆ ಆಗಿವೆ? ಅವುಗಳ ಅವಯವಾರ್ಥವೇನು?

3) ಕೆಳಗೆ ಕೊಟ್ಟಿರುವ ಪದ್ಯ ಯಾವ ಜಾತಿಯದು? ಅದರ ಲಕ್ಷಣಗಳೇನು? ಪ್ರಸ್ತಾರಹಾಕಿ ತೋರಿಸಿ:

ಕಳುಹಬೇಹುದು ದೇವ; ದಿನಪತಿ
ಯಿಳಿದನಪರಾಂಬುಧಿಗೆ, ಸಂಪ್ರತಿ
ಯುಳಿದಹೊತ್ತಿಂದೀಗ ನಟ್ಟನೆ ನೀವು ಪಾಂಡವರು॥
ಹುಲುಸರನಿ ಹಾವಹುದು ಹುತ್ತಿನ
ಬಳಿಯೊಳಿರಲಜ್ಞರಿಗೆ ಹಿಸುಣರ
ಒಳಕೆ ಹೊಗುವುದು ಕಳುಹಬೇಕೆಂದಂಘ್ರಿಗೆರಗಿದನು ॥

## 1946

1) ವಾಚ್ಯಲಿಂಗ, ದ್ವಿವಚನ, ಪ್ರಕಾರವಾಚಕ — ಎಂದರೇನು ?

2) ಹಂದೆಗಾಗಲ್, ಹಡಪಿಗ, ಕಪ್ಪಿತ ಈ ಪದಗಳ ವಿಚಾರವಾಗಿ ನಿಮಗೆ ಗೊತ್ತಿರುವ ವ್ಯಾಕರಣಾಂಶಗಳನ್ನು ಬರೆಯಿರಿ.

3) ಕೆಳಗೆ ಕೊಟ್ಟಿರುವ ಪದ್ಯ, ಯಾವ ಜಾತಿಯದು? ಅದರ ಲಕ್ಷಣಗಳೇನು? ಪ್ರಸ್ತಾರಹಾಕಿ ತೋರಿಸಿ.

ಬೊಮ್ಮವನು ಅರಿದಿಹರೆ ಸುಮ್ಮನಿದ್ದಿರಬೇಕು।
ಬೊಮ್ಮವನು ಅರಿದು ಬುಸಿರಿದರೆ ಕಳಹೋಗ।
ಕೆಮ್ಮಿದಂತಕ್ಕು ಸರ್ವಜ್ಞ ॥

## 1947

1) ಸಮಾಸ, ವಿಗ್ರಹವಾಕ್ಯ ಎಂದರೇನು ?
ಎಣ್ದಿಸೆ, ಕೇಸುರಿ, ನಡೆವಣ, ತಣ್ನೆಳಲ್, ನಿಜ್ಜೋಟ—ಇವುಗಳಿಗೆ ವಿಗ್ರಹವಾಕ್ಯಗಳನ್ನು ಬರೆಯಿರಿ.

2) ಕೆಳಗಿನ ಪದ್ಯಭಾಗಕ್ಕೆ ಪ್ರಸ್ತಾರಹಾಕಿ ಛಂದಸ್ಸನ್ನು ತಿಳಿಸಿ.

ಹಿಡಿದು ರಾಜ್ಯವ ಕೊಂಡು ಹೆಂಗುಸ
ಬಡಿದು ಪಾಂಡವರಾಯರನು ಹೊರ
ವಡಿಸಿ ಕೊಬ್ಬಿದ ಭುಜಬಲವನೆನ್ನೊಡನೆ ತೋರಿದನೆ ||

3) ಗಾವಿಲ, ಮಿತ್ತು, ಹವಣು, ಬಾಣಸ, ಸರ—ಈ ಪದಗಳ ಸಂಸ್ಕೃತ ರೂಪವನ್ನು ತಿಳಿಸಿ.

4) ಕೃದಂತ ಎಂದರೇನು ? ಉದಾಹರಣೆ ಕೊಡಿ.

## 1948

1) ಅವ್ಯಯವೆಂದರೇನು ? ಅವ್ಯಯಗಳ ಮುಖ್ಯಭೇದಗಳೆಷ್ಟು ? ನಿಪಾತಾವ್ಯಯಗಳೆಂದರೇನೆಂಬುದನ್ನು ತಿಳಿಸಿ, ಕೆಲವು ಉದಾಹರಣೆಗಳನ್ನು ಬರೆಯಿರಿ.

2) ತತ್ಪುರುಷ ಸಮಾಸ ಲಕ್ಷಣವೇನು? ತತ್ಪುರುಷ ಸಮಾಸಕ್ಕೆ ಮೂರು ಉದಾಹರಣೆಗಳನ್ನು ಬರೆಯಿರಿ.

3) ಕಾವ್ಯ, ಋಷಿ, ಯಮ, ಶೂನ್ಯ, ವಾಲ, ವಾಪಿ, ಅಕ್ಷರ, ಜಾತಿ, ಕುಠಾರ, ಘಟಿಕಾ—ಇವುಗಳ ತದ್ಭವ ರೂಪಗಳನ್ನು ಬರೆಯಿರಿ.

4) ಮಿಸುಕಬಾರದು ಪ್ರಳಯಕಾಲನ
ಮುಸುಕ ನುಗಿವವರಾರು ಕೌರವ
ನಸವು ಬಲಸ್ಥೈರಥವ ಮರುಳಿಚು ಚಾಳಿಸುವೆನೆಂದ||

ಈ ಮೇಲಿನ ಪದ್ಯಭಾಗಕ್ಕೆ ಪ್ರಸ್ತಾರ ಹಾಕಿ ಛಂದಸ್ಸನ್ನು ಸೂಚಿಸಿ.

---

ಜನರಲ್ ಏಜೆನ್ಸಿ ಮುದ್ರಣಾಲಯ ತುಮಕೂರು.

# ತಿದ್ದುಪಡಿ

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೩ | ೭ | ಅದೇಶ | ಆದೇಶ |
| ೩ | ೭ | ಕೊನೆಯಲ್ಲಿ | ಮೊದಲಲ್ಲಿ |
| ೩ | ೧೨ | ಸಂಭೋದನೆ | ಸಂಬೋಧನೆ |
| ೪ | ೪ | ಗುರುರ್ವಾಜ್ಞೆ | ಗುರ್ವಾಜ್ಞೆ |
| ೪ | ೨೩ | ಆಕ್ಷರ | ಅಕ್ಷರ |
| ೭ | ೬ | ಆಂಕಿತ | ಅಂಕಿತ |
| ೭ | ೧೫ | ವಿಭಕ್ತಿಗಳೂ | ವಿಭಕ್ತಿಗಳಿಗೂ |
| ೧೨ | ೪ | ನಿಜಪಲ್ಲಟ | ನಿಜರೂಪ |
| ೧೨ | ೨೦ | ಗೀಟು ಎಲ್ಲಕ್ಕೂ ಇದೆ | ನಾಮಪದಗಳಿಗೆ ಮಾತ್ರ |
| ೧೪ | ೨೧ | ಅರಿ (ಹ. ಕ.) | ಅಂ (ಹ. ಕ.) |
| ೧೫ | ೧೦ | ಪಿಸ್ಯೆಯೇ | ವಿದ್ಯೆಯೇ |
| ೧೬ | ೧೩ | ಮದುರೆ | ಮಧುರೆ |
| ೨೦ | ೧೪ | ನೋಡಲಾರೆನು | ನೋಡಲಾರನು |
| ೨೧ | ೧೪ | ಕತೃರ್ಥಕ್ಕೆ | ಕರ್ತ್ರರ್ಥಕ್ಕೆ |
| ೨೨ | ೭ | ಭಿನ್ನಕರ್ತೃಕ | ಭಿನ್ನಕರ್ತೃ |
| ೨೩ | ೬ | ಈ ಜಾಣ | ಈಜೋಣ |
| ೨೪ | ೧ | ತದ್ಧಿತಾಂತ | ತದ್ಧಿತಾಂತ |
| ೨೪ | ೧೪ | ಕೃಧಂತ | ಕೃದಂತ |
| ೨೪ | ೨೨ | ಅಡುವಿಕೆ, ಆಟ | ಆಡುವಿಕೆ, ಆಟ |
| ೪೦ | ೧೩ | ಮೇಲ್ಕಂಡ | ಮೇಲ್ಕಂಡಂತೆ |
| ೫೬ | ೨೦ | ಸಮಾನಧರ್ಮ | ಸಮಾನ ಧರ್ಮ |
| ೬೧ | ೧೧ | ಕಾವ್ಯದ ಆತ್ಮ | ಕಾವ್ಯದ ಆತ್ಮ. |

ಪ್ರೌಢ ಶಾಲಾ

# ಪ್ರಬಂಧಸಾರ

ಪಂಡಿತ ತಿರು. ಶ್ರೀನಿವಾಸಾಚಾರ್ಯರು

ಮೋಹನ್ ಸ್ಟೋರ್ಸ್,
ಮಧುಗಿರಿ

೧೯೪೮

ವಿಕ್ರಯಾಧಿಕಾರಿಗಳು :
**ಮೋಹನ್ ಸ್ಟೋರ್ಸ್,**
ಪ್ರೊಪ್ರೈಟರ್ಸ್ :
**ಡಿ. ವಿ. ಗಂಗಾಧರಶೆಟ್ಟಿ ಅಂಡ್ ಬ್ರದರ್,**
ಮಧುಗಿರಿ, ತುಮಕೂರು ಜಿಲ್ಲೆ



ಸ್ಟಾಕಿಸ್ಟರು :
**ವೈ. ಎನ್. ಜಗನ್ನಾಥಶೆಟ್ಟಿ ಅಂಡ್ ಬ್ರದರ್,**
ನಗರ್ತರಪೇಟೆ, ಬೆಂಗಳೂರು







ಮುದ್ರಣಕಾರರು :
**ಜಿ. ಪ್ರಹಲ್ಲಾದರಾವ್ ಮತ್ತು ಸಹೋದರರು,**
ಮಾಲೀಕರು,
**ಜನರಲ್ ಏಜೆನ್ಸಿ ಮುದ್ರಣಾಲಯ,**
ಮಾರ್ಕೆಟ್ ಚೌಕ, ತುಮಕೂರು

# ಪೀಠಿಕೆ



ವಿದ್ಯಾ ಇಲಾಖೆಯವರು ಪ್ರೌಢಶಾಲೆಗಳಿಗೆ ಸೂಚಿಸಿರುವ ಪ್ರಬಂಧ ಪಾಠಗಳಿಗೆ ನೆರವಾಗುವಂತೆ ಅನೇಕ ವಿದ್ವಾಂಸರ ನೆರವನ್ನು ಪಡೆದು ನಾನು ಒಂದು ದೊಡ್ಡ ಪ್ರಬಂಧ ಪುಸ್ತಕವನ್ನು ರಚಿಸಿ ಮುದ್ರಣಕ್ಕೆ ಸಿದ್ಧಪಡಿಸಿದೆನು. ಆದರೆ ಈಗಿನ ಕಾಗದದ ಮತ್ತು ಮುದ್ರಣದ ತೊಂದರೆಯಿಂದ ಅದನ್ನು ಪ್ರಕಟಿಸಲಾಗದೆ, ಈಗ ಪೌಢಶಾಲೆಗಳಲ್ಲಿ ಪ್ರಬಂಧ ಮಾರ್ಗದಲ್ಲಿ ಸಹಾಯ ವಾಗುವ ಪುಸ್ತಕವು ಯಾವುದೂ ಇರಲಿಲ್ಲವಾಗಿ, ಆದಷ್ಟು ಸಹಾಯವಾಗುವ ಸಾರರೂಪವಾದ ಪುಸ್ತಕವನ್ನು ರಚಿಸಿ ಅಭ್ಯಾಸಿಗಳ ಮುಂದಿಟ್ಟಿರುವೆನು. ಇದರಿಂದ ಹೆಚ್ಚು ಪ್ರಯೋಜನವಾಗುವುದಾದರೆ, ಮುಂದಿನ ಪ್ರೋತ್ಸಾಹದಿಂದ ಮೂರು ಬೇರೆ ಬೇರೆ ಮಟ್ಟದ ಪುಸ್ತಕಗಳನ್ನು ಪ್ರಕಟಿಸಲಿರುವೆನು.

ಕನ್ನಡ ಪ್ರಬಂಧ ರಚನೆಗೆ ಬೇಕಾಗುವ ಸೂಚನೆಗಳ ಜೊತೆಗೆ ವ್ಯಕ್ತಿ ಚಿತ್ರ, ಹರಟೆ ಮೊದಲಾದ ಲೇಖನ ವ್ಯವಸಾಯಕ್ಕೆ ಬೇಕಾದ ಮಾದರಿಯ ಪ್ರಬಂಧವನ್ನೂ ಪುಸ್ತಕದ ಕೊನೆಯ ಭಾಗದಲ್ಲಿ ಸೇರಿಸಿರುತ್ತೇನೆ :

ಮಾದರಿ ಪ್ರಬಂಧಗಳು :

೧) ನಾನು ಲೇಖಕನಾದುದು (ಹರಟೆ)
೨) ನಾನು ಈಜು ಕಲಿತದ್ದು (ಕಲ್ಪನೆ)
೩) ಸರ್. ಎಂ. ವಿಶ್ವೇಶ್ವರಯ್ಯ (ವ್ಯಕ್ತಿಚಿತ್ರ)

ಈ ಮೇಲ್ಕಂಡ ಪ್ರಬಂಧಗಳನ್ನು ನನ್ನ ಪುಸ್ತಕದಲ್ಲಿ ಸೇರಿಸಲು ವಿಶ್ವಾಸದಿಂದ ಸಮ್ಮತಿಸಿದ ಶ್ರೀಯುತರುಗಳಾದ ಎಂ. ವಿ. ಸೀತಾರಾಮಯ್ಯ, ಎಂ. ಎ., ಅವರಿಗೂ, ಎಲ್. ಪ್ರಹ್ಲಾದರಾವ್, ಎಂ. ಎ., ಅವರಿಗೂ, ಸಿಂಪಿ ಲಿಂಗಣ್ಣನವರಿಗೂ ಮತ್ತು ಎಸ್. ಮಂಜುನಾಥ್, ಎಂ. ಎ., ಇವರೇ ಮೊದಲಾದ ಇತರ ಮಾನ್ಯ ಮಹನೀಯರಿಗೂ ನನ್ನ ವಂದನೆಗಳು.

ಮಧುಗಿರಿ
೧೫-೮-೪೮

**ತಿರು. ಶ್ರೀನಿವಾಸಾಚಾರ್ಯ**
ಕನ್ನಡ ಪಂಡಿತ,
ಸರ್ಕಾರಿ ಪೌಢಶಾಲೆ, ಮಧುಗಿರಿ.

# ವಿ ಷ ಯ ಸೂ ಚಿ.

# ಪ್ರಬಂಧಸಾರ

## ಪ್ರಬಂಧ

ಪ್ರಬಂಧವನ್ನು ಲೇಖಕನ ವ್ಯಕ್ತಿವೈಶಿಷ್ಟ್ಯದಿಂದ ಕೂಡಿದ ಸ್ವತಂತ್ರವಾದ ಕಾವ್ಯಭೇದವೆಂದಾಗಲೀ ರೂಪ ರಚನೆಗಳಿಂದ ಕೂಡಿದ ಗದ್ಯ ಸಾಹಿತ್ಯ ವಿಭೇದವೆಂದಾಗಲೀ ಕರೆಯಬಹುದು.

ಇಂಗ್ಲಿಷ್ ಭಾಷೆಯಲ್ಲಿ ಪ್ರಬಂಧದ ಅರ್ಥವು 'ಆಲೋಚನೆಗಳನ್ನು ಹೊರಗಿಡುವ ಪ್ರಯತ್ನ' ಎಂಬುದಾಗಿದೆ. ಈ ಸಾಹಿತ್ಯ ರೀತಿಯಲ್ಲಿ ಪ್ರಬಂಧಗಳು ಎರಡು ವಿಧಗಳಾಗಿರುವುವು. (೧) ಗಹನವಾದ ವಿಚಾರಗಳನ್ನು ಗಂಭೀರವಾದ ಶೈಲಿಯಲ್ಲಿ ಸುಮಾರು ಎರಡು ಪುಟಗಳಿಂದ ನೂರೈವತ್ತು ಪುಟಗಳವರೆಗಿರುವ ಬರೆವಣಿಗೆ. (೨) ಸುಲಭವೂ ಮನೋಹರವೂ ಆದ ಸಂಭಾಷಣೆಯ ಶೈಲಿಯಲ್ಲಿರುವ ಲಲಿತ ಪ್ರಬಂಧಗಳು. ಹೀಗೆ ಕಠಿಣ ನಿಯಮ ಸಿಕ್ಕದ ಸರಸ ಸಲ್ಲಾಪವಾಗಲೀ ರೂಪರಚನೆಗಳಿಂದ ಕೂಡಿದ ಲೇಖನವಾಗಲಿ **ಪ್ರಬಂಧ** ಅಥವಾ **ನಿಬಂಧ** ನಿಸಬಹುದಾಗಿದೆ. ಅಂತೂ **ಪ್ರಬಂಧವು** ಕೌಶಲ್ಯದಿಂದ ಜೋಡಣೆಯಾಗಿರುವ ಆಲೋಚನೆಗಳ ಮಾಲೆಯಾಗಿರುವುದು.

ಸಾಧಾರಣವಾಗಿ ಶಾಲೆಗಳಲ್ಲಿ ವಿದ್ಯಾರ್ಥಿಗಳು ಬರೆಯುವ ವಾಕ್ಯ ರಚನೆಗಳು ಒಂದು ಗೊತ್ತಾದ ಕಾಲಕ್ಕೆ ಸರಿಯಾಗಿ, ಸಂಕ್ಷೇಪವಾಗಿಯೂ ಒಂದು ಕ್ರಮಕಟ್ಟುಗಳಿಗೆ ಒಳಪಟ್ಟುದಾಗಿಯೂ ಇರಬೇಕಾಗುವುದರಿಂದ ಈ

ಬಗೆ ಬರೆವಣಿಗೆಗಳನ್ನು **ಶಾಲಾಪ್ರಬಂಧಗಳು** ಎಂಬುದಾಗಿ ವ್ಯವಹರಿಸುವರು ವಿದ್ಯಾರ್ಥಿಗಳ ಆಗತ್ಯದೃಷ್ಟಿಯಿಂದ ಈ ಶಾಲಾ ಪ್ರಬಂಧಗಳ ಪರಿಚಯವನ್ನು ಸ್ವಲ್ಪಮಟ್ಟಿಗೆ ಈ ಪುಸ್ತಕದಲ್ಲಿ ಮಾಡಿಕೊಡಲಾಗಿದೆ.

## ಪ್ರಬಂಧವು ಕಾವ್ಯಾಂಗ

ಪ್ರಬಂಧ ಗದ್ಯಕಾವ್ಯದ ಭಾಗ. ಕಾವ್ಯವು ಶಬ್ದರೂಪವಾದುದು. ಶಬ್ದವು ಅರ್ಥ ಅಥವಾ ಭಾವವನ್ನನುಸರಿಸುವುದು "ರಸಾತ್ಮಕವಾಗಿದ್ದು ಹೃದಯಾನಂದವನ್ನುಂಟುಮಾಡುವ, ದೋಷರಹಿತವಾದ, ಗುಣಾಲಂಕಾರದಿಂದ ಕೂಡಿರುವ ಶಬ್ದಾರ್ಥಗಳೇ ಕಾವ್ಯ" ವೆಂದು ಲಕ್ಷಣಶಾಸ್ತ್ರಗಳು ತಿಳಿಸುತ್ತವೆ. ಪ್ರಬಂಧವು ಕಾವ್ಯಾಂಗವಾದುದರಿಂದ, ಇದೂ ಕೂಡ ರಸಾತ್ಮಕವಾಗಿದ್ದು ಸಹೃದಯಾನಂದವನ್ನುಂಟು ಮಾಡಬೇಕೆಂಬುದನ್ನು ಮರೆಯಬಾರದು. ಉತ್ತಮ ಪ್ರಬಂಧದಲ್ಲಿ ರಸವತ್ತಾದ ಅರ್ಥವಿರಬೇಕು. ಓದಿದ ಕೂಡಲೆ ಮನಸ್ಸಿಗೆ ಆನಂದವುಂಟಾಗಬೇಕು.

## ಲೇಖಕ—ಲೇಖನ

'ಕವೇಃ ಕರ್ಮ ಕಾವ್ಯಂ' ಎಂಬಂತೆ ಕವಿಯು (ಲೇಖಕನು) ತನ್ನ ಕುಶಲ ಕರ್ಮದಿಂದ ಇಡುವ ಶಬ್ದಾರ್ಥಗಳೇ (ಬರೆಯುವ ಪ್ರಬಂಧಾದಿ ಲೇಖನಗಳೇ) ಕಾವ್ಯವೆನಿಸುವುದು. ಕವಿಯ ಸ್ಫೂರ್ತಿಗೆ ತಕ್ಕಂತೆ ಕಾವ್ಯ ವಾಹಿನಿಯು ಪ್ರವಹಿಸುವುದು.

ಲೇಖಕನ ಸ್ಫೂರ್ತಿಯು ಎರಡು ವಿಧವಾಗಿರುವುದು. ಒಂದು ಸ್ವಂತ ಆಲೋಚನೆ ಮತ್ತು ಭಾವನೆಗಳು, ಮತ್ತೊಂದು ಸುತ್ತಮುತ್ತಲಿನ ಪರಿಸ್ಥಿತಿಗನುಸಾರವಾದುದು. ಕವಿಯ ಈ ಎರಡು ಸ್ಫೂರ್ತಿಗಳನ್ನು ಶಬ್ದಾರ್ಥ ಚಮತ್ಕಾರಗಳಿಂದ ಹಾಸುಹೊಕ್ಕಾಗಿ ಹೆಣೆದು ಸುಂದರವಾದ ಕಾವ್ಯಪಟವನ್ನು ಸಿದ್ಧಪಡಿಸುವನು. ಇಂತಹ ಕಾವ್ಯವನ್ನೋದುವುದರಿಂದಲೇ ಆನಂದ ಉಂಟಾಗುವುದು. ಆನಂದವೇ ಕಾವ್ಯದ ಚರಮಲಕ್ಷ್ಯ.

೩

## ಪ್ರಬಂಧ ಕಲೆ

ಪ್ರಬಂಧ ರಚನೆಯು ಸುಂದರವಾದ ಲೇಖನ ಕಲೆ. ಲೇಖಕನ ಸಾಮರ್ಥ್ಯದಿಂದ ಯಾವುದು ಮನೋಹರವಾಗಿ ಕಟ್ಟಲ್ಪಡುವುದೋ ಆ ರಮಣೀಯ ಶಬ್ದಾರ್ಥಗಳೇ ಪ್ರಬಂಧವೆಂಬುದನ್ನು ಹಿಂದೆಯೇ ನಿರೂಪಿಸಿದೆ. ಕಾವ್ಯಗಳಲ್ಲಿ ಪದ್ಯಕ್ಕಿಂತ ಗದ್ಯ ಬರೆಹವು ಸುಲಭವಾದುದಾದರೂ ಪ್ರಬಂಧ ದೃಷ್ಟಿಯಿಂದ ಕಠಿಣವಾಗಿರುವ ಈ ಕಲೆಯನ್ನು ಉಪಾಸನಾಬಲದಿಂದ ಸುಲಭಸಾಧ್ಯ ಮಾಡಿಕೊಳ್ಳಬಹುದು. ಈ ಕಲೋಪಾಸಕನು ಶಕ್ತಿ ಯುಕ್ತಿಗಳಿಂದ ನುಡಿಸುವ ಭಾವನಾತರಂಗ ರೂಪವಾದ ವೀಣಾ ವಾಣಿಯು ಕೇಳುವ ಸಹೃದಯರ ಹೃದಯ ನಾಡಿಯನ್ನು ಹೊಕ್ಕು ಮೀಟುತ್ತಾ ಆನಂದವನ್ನುಂಟು ಮಾಡುವುದು. ಉತ್ತಮ ಪ್ರಬಂಧವನ್ನೋದುವವರಿಗೆ ಈ ಕಲೋಪಾಸಕನ ಸೌಂದರ್ಯವು ವ್ಯಕ್ತವಾಗದಿರದು.

"ಖಡ್ಗಕ್ಕಿಂತ ಲೇಖನಿಗೆ ಶಕ್ತಿಯು ಹೆಚ್ಚು" ಎಂಬ ಮಾತಿನ ಅರ್ಥವನ್ನು ಗಮನಿಸಿದರೆ ಲೇಖಕನ ಶಕ್ತಿಯು ಅನೇಕ ರಾಜ್ಯಗಳ ಪ್ರಜೆ ಮತ್ತು ರಾಜರ ಮನೋವೃತ್ತಿಯನ್ನು ಬದಲಾಯಿಸಿ ಅವರಲ್ಲಿ ಹೊಸ ಭಾವನೆಯನ್ನು ಹುಟ್ಟಿಸಿದೆಯೆಂಬುದಕ್ಕೂ, ಅವರನ್ನು ನೀತಿವಂತರನ್ನಾಗಿ ಮಾಡಿದೆಯೆಂಬುದಕ್ಕೂ ಸಾಕಾದಷ್ಟು ನಿದರ್ಶನಗಳಿವೆ. ಇಂತಹ ಶಕ್ತಿಯು ಪ್ರಬಂಧದಲ್ಲಿ ಹುಟ್ಟಲು ಅವು ಎಷ್ಟು ಜನಾದರಣೀಯವಾಗಿರಬೇಕೆಂಬುದನ್ನು ಮರೆಯು ಬಾರದು. ಇದಕ್ಕೆ ಕಾರಣವು ಆ ಪ್ರಬಂಧದ ಕಲಾ ಸೌಂದರ್ಯವೇ ಅಲ್ಲವೇ ?

## ಪ್ರಬಂಧದ ಭಾಷೆ

ನಮ್ಮ ಮನಸ್ಸಿನಲ್ಲಿ ಹುಟ್ಟುವ ಆಲೋಚನೆಗಳನ್ನಾಗಲೀ ಭಾವನೆಗಳನ್ನಾಗಲೀ ನಾವು ಮಾತಿನ ಮೂಲಕ ತಿಳಿಯಪಡಿಸುತ್ತೇವೆ. ಆಡುವ ಮಾತೇ ಬರೆವಣಿಗೆಯಲ್ಲಿ ಬೇರೆ ರೂಪವನ್ನು ತಾಳಿರುತ್ತದೆ. ಇದೂ—ಕಾಲ ದೇಶ—ಸ್ಥಿತಿ—ಸಂಸ್ಕೃತಿ, ಬರೆಯುವವನ ಪ್ರತಿಭೆಗನುಸಾರವಾಗಿ ಬದಲಾಯಿಸುತ್ತಾ ಹೋಗುತ್ತದೆ. ಇದರ ಜೊತೆಗೆ ಯಥಾರ್ಥತೆ, ಸ್ಪಷ್ಟತೆ, ಸರಳತೆ

ಮತ್ತು ಮನೋಹರತೆಗಳೆಂಬ ಗುಣಗಳಿಂದ ಕೂಡಿದ ಲೇಖನ ಲಿಪಿಯು ಎಲ್ಲರಿಗೂ ಪ್ರಿಯವಾಗಿರುತ್ತದೆ. ಹೀಗಲ್ಲದೆ ನಾವು ಬರೆಯುವ ಮಾತುಗಳು ಬಿಗಿತಪ್ಪಿದ ಸಡಿಲ ಪದಗಳಿಂದ ಕೂಡಿದ್ದರಾಗಲೀ ಅರ್ಥವಾಗದ ಕಠಿಣಪದ ಗಳಿಂದ ಸೇರಿದ್ದರಾಗಲೀ ಓದುಗರ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಲಾರದು. ಒಂದು ವೇಳೆ ಬಿಗಿಯಾದ ಮಾತಿನ ಮತ್ತು ಅರ್ಥವತ್ತಾದ ವಾಕ್ಯರಚನೆಯಾದರೂ, ಭಾಷಾಶುದ್ಧಿಯೂ, ಸತ್ಯಾಂಶವೂ, ವಿಷಯ ಪ್ರತಿ ಪಾದನಾಶಕ್ತಿಯೂ, ಇಲ್ಲದಿದ್ದರೆ ಪ್ರಯೋಜನವಿಲ್ಲವಲ್ಲವೆ ?

ಆದುದರಿಂದ ಬರೆಹಗಾರನು ಬರೆಯ ಬೇಕಾದ ಭಾಷೆ, ಶಬ್ದಕೋಶ ಮತ್ತು ಅದರ ಪ್ರಯೋಗ ಅರ್ಥ ಮತ್ತು ರೂಪಗಳೇ ಮೊದಲಾದುವುಗಳ ಪೂರ್ಣ ಪರಿಚಯವನ್ನು ಹೊಂದಿರಬೇಕು. ಕನ್ನಡದಲ್ಲಿ ಪ್ರಬಂಧ ಬರೆಯು ವವರು ಅನ್ಯಭಾಷಾ ಪದಗಳನ್ನು ಸೇರಿಸದೆ ಶುದ್ಧವಾದ ಸಿರಿಗನ್ನಡದಲ್ಲೇ ಬರೆಯುವ ರೂಢಿಮಾಡಬೇಕು. ಮೇಲೆ ಹೇಳಿದಂತೆ ಇದರಿಂದ ಪ್ರಬಂಧಕ್ಕೆ ಸೊಬಗುಂಟಾಗುವುದು.

## ಪ್ರಬಂಧದ ಹೊರಮೈ

ವಾಕ್ಯಗಳ ಸ್ಪಷ್ಟಾರ್ಥತೆ ಲಿಪಿ ಸೌಂದರ್ಯ (ಅಕ್ಷರಗಳನ್ನು ಅಂದ ವಾಗಿ ಬರೆಯುವುದು) ಉಚಿತಸ್ಥಳಗಳಲ್ಲಿ ಲೇಖನ ಚಿಹ್ನೆಗಳನ್ನುಪಯೋಗಿಸು ವುದು ಕಾಗದದ ಎಡಭಾಗದಲ್ಲಿ ಸಾಕಷ್ಟು ಸ್ಥಳಬಿಟ್ಟು ಬರೆಯುವ ರೂಢಿ ವಾಕ್ಯವೃಂದಗಳನ್ನು ವಿಂಗಡಿಸುವುದು ಸುಂದರ ಭಾಷೆಯು ಕಾರಣಗಳು. ಇವು ಪ್ರಬಂಧಕ್ಕೆ ರೂಪಕೊಡುವ ಹೊರಮೈ ಎಂಬುದನ್ನು ಮರೆಯಬಾರದು.

| **ಲೇಖನ ಚಿಹ್ನೆಗಳು** |  | **ಉಪಯೋಗಿಸುವ ರೀತಿ** |
|---|---|---|
| ೧) **ಪೂರ್ಣವಿರಾಮ (.)** | | ವಾಕ್ಯಗಳು ಪೂರ್ತಿಯಾದ ಮೇಲೆ |
| ೨) **ಅರ್ಧವಿರಾಮ (;)** | | ಪರಸ್ಪರ ಸಂಬಂಧವುಳ್ಳ ವಾಕ್ಯಗಳ ನಡುವೆ. |

| | |
|---|---|
| (೬ ಅಲ್ಪವಿರಾಮ (,) | ವಾಕ್ಯಗಳನ್ನು ಅರ್ಥವಾಗುವಂತೆ ತಡೆದು ನಿಲ್ಲಿಸುವಾಗ. |
| ೪) ವಿವರಣಚಿಹ್ನೆ (:) | ಅರ್ಥವಿವರಣೆಯಲ್ಲಿ. |
| ೫) ಗೀಟು (—) | ವಿಚಾರ ಬದಲಾವಣೆ ತಡೆಗಳಲ್ಲಿ. |
| ೬) ಪ್ರಶ್ನಚಿಹ್ನೆ (?) | ಪ್ರಶ್ನಾರ್ಥಕ ವಾಕ್ಯಗಳಕೊನೆಗೆ. |
| ೭) ಅವರಣ (ಅಥವಾ ಅವಕರಣ) ಚಿಹ್ನೆ (" ") | ಪ್ರತ್ಯಕ್ಷ ಕಥನಗಳಲ್ಲಿ ಮತ್ತು ಅವತರಣ ವಾಕ್ಯಗಳಲ್ಲಿ. |
| ೮) ಭಾವಚಿಹ್ನೆ (!) | ಸುಖ ದುಃಖ ಆಶ್ಚರ್ಯಾದಿ ಭಾವ ಪ್ರದರ್ಶನಗಳಲ್ಲಿ. |

## ವಾಕ್ಯ ಬೃಂದ

ಒಂದೇ ವಿಷಯವನ್ನು ಕುರಿತು ಹೇಳುವ ಪರಸ್ಪರ ಸಂಬಂಧವುಳ್ಳ ಹಲವು ವಾಕ್ಯಗಳ ಗುಂಪಿಗೆ **ವಾಕ್ಯಬೃಂದ** ಅಥವ **ಪರಿಚ್ಛೇಧ**ನೆಂದು ಹೆಸರು. ಇದರ ಸರಿಯಾದ ವಿಭಾಗದಿಂದ ಪ್ರಬಂಧದ ಹೊರನ್ಯೆಯ ಅಂದವು ಹೆಚ್ಚುವುದು ವಾಕ್ಯಬೃಂದ ರಚನೆಗೆ ಐಕ್ಯತೆ ಕ್ರಮ ಮತ್ತು ವೈವಿಧ್ಯಗಳೆಂಬ ಮೂರು ಗುಣಗಳು ಅವಶ್ಯಕ.

## ಐಕ್ಯ

ಒಂದೇ ಒಂದು ವಿಚಾರವನ್ನು ವಿವರಿಸಿ ತಿಳಿಸುವ ವಾಕ್ಯಗಳ ಗುಂಪಿಗೆ ಐಕ್ಯವೆಂದು ಹೆಸರು ಇದರ ಪ್ರತಿಯೊಂದು ವಾಕ್ಯವೂ ಪ್ರಧಾನ. ವಿಷಯುವನ್ನು ತಿಳಿಸುವ ಮುಖ್ಯವಾಕ್ಯಕ್ಕೆ ಹೊಂದಿಕೊಂಡಿರಬೇಕು.

## ಕ್ರಮ

ಪ್ರಬಂಧದ ಸಂಗತಿಗಳನ್ನು ಒಂದಾದ ಮೇಲೊಂದರಂತೆ ಉಚಿತ ಸ್ಥಳಗಳಲ್ಲಿ ತಿಳಿಸುವುದರಿಂದ ಒಂದು ಕ್ರಮವೇರ್ಪಡುವುದು. ವಾಕ್ಯಬೃಂದ

ದಲ್ಲಿ ಕ್ರಮವಿದ್ದಷ್ಟೂ ಸುಲಭಾರ್ಥ ಗ್ರಹಣಕ್ಕೆ ಅನುಕೂಲವಾಗುವುದು. ಮೊದಲು ಮತ್ತು ಕೊನೆಯ ವಾಕ್ಯಗಳು ಹೊಂದಿಕೆಯುಳ್ಳದ್ದಾಗಿರಬೇಕು.

## ವೈವಿಧ್ಯ

ವಾಕ್ಯಬೃಂದದ ವಾಕ್ಯಗಳು ಹಲವು ರೀತಿಯಲ್ಲಿರುವುದೇ ವೈವಿಧ್ಯವು. ವಾಕ್ಯದಂತೆಯೇ ವಾಕ್ಯಬೃಂದವೂ ಸಮಯೋಚಿತವಾಗಿ ಚಿಕ್ಕದು ಅಥವಾ ದೊಡ್ಡದಾಗಿರಬೇಕು.

## ವಿಷಯ ವಿಸ್ತಾರ

ಕಿರಿದಾದ ಅರ್ಥವನ್ನು ಹಿರಿದಾಗಿ ಹೇಳುವುದೂ, ಹಿರಿಯ ವಿಷಯವನ್ನು ಕಿರಿದಾಗಿ ಮಾಡುವುದೂ ಪ್ರಬಂಧ ರಚನೆಯಲ್ಲಿ ಅತ್ಯಾವಶ್ಯಕವಾಗಿ ತಿಳಿಯತಕ್ಕವು. ಅರ್ಥಗರ್ಭಿತವಾದ ಚಿಕ್ಕಮಾತನ್ನು ವಿವರಿಸಿ ಹೇಳುವುದೂ ವಿಷಯವಿಸ್ತಾರವು. ಇದನ್ನು ಬರೆಯಬೇಕಾದಾಗ ಕೊಟ್ಟಮಾತನ್ನು ಅನೇಕ ಬಾರಿ ಓದಿ ಹೊಂದಿಕೆಯುಳ್ಳ ವಾಕ್ಯಗಳಿಂದ ಒಂದು ವಾಕ್ಯಬೃಂದದಲ್ಲಿ ಪ್ರತಿಪಾದಿಸಬೇಕು.

## ಮಾದರಿ

ಬಡವಂ ಬಲ್ಲಿದನಾಗನೆ ?

ಯಾವನೊಬ್ಬ ಮನುಷ್ಯನೂ ಸದಾ ಕಾಲವೂ ಒಂದೇ ರೀತಿಯಲ್ಲಿರಲಾರನು. ಐಶ್ವರ್ಯವು ಯಾರಿಗೂ ಸ್ಥಿರವಲ್ಲ. ಅದು ಯಾರ ಹಕ್ಕೂ ಅಲ್ಲ. ಹಣಗಾರನು ಬಡವನಾಗಬಹುದು. ಹಾಗೆಯೇ ಬಡಮನುಷ್ಯನು ಒಂದಲ್ಲೊಂದು ದಿನ ಹಣಗಾರನಾಗುವುದು ನಿಶ್ಚಯ.

## ವಿಷಯ ಸಂಗ್ರಹ

ವಿಸ್ತಾರವಾದ ವಿಷಯದಿಂದ ಮುಖ್ಯ ವಿಷಯಗಳನ್ನು ಮಾತ್ರ ಆಯ್ದು ಸಂಗ್ರಹಿಸಿ ಬರೆಯುವುದೇ ವಿಷಯ ಸಂಗ್ರಹವು. ಇದನ್ನು ಬರೆಯು

ವಾಗ ಮೂಲ ವಿಚಾರವನ್ನು ಬಿಡದೆ ಸ್ವಂತ ಶೈಲಿಯಲ್ಲಿ ಪೂರ್ಣಾಭಿಪ್ರಾಯವು ಬರುವಂತೆ, ಅದರ ತಿರುಳನ್ನು ಕಿರಿಯ ವಾಕ್ಯಗಳಲ್ಲಿ ಕಾಣಿಸಬೇಕು, ವರ್ಣನಾದಿ ಭಾಗಗಳನ್ನೂ, ಅವತರಣಗಳನ್ನೂ, ಬಿಟ್ಟು ಪರೋಕ್ಷ ಕಥನದಲ್ಲಿ ತಿಳಿಸುವುದರಿಂದ ಈ ಕೆಲಸವು ಸುಲಭವಾಗುವುದು.

## ವಿಸ್ತಾರ ವಿಷಯ

### ಮಾದರಿ

ಉಪನ್ಯಾಸಕನು ಬಹಳ ಹೊತ್ತು ನಿಂತಲ್ಲಿ ನಿಲ್ಲದೆ, ಕೈಕಾಲುಗಳನ್ನಲ್ಲಾಡಿಸುತ್ತಾ, ಹೇಳಿದ್ದೇ ಹೇಳುತ್ತಾ, ಮಧ್ಯೆಮಧ್ಯೆ ಸಿಂಹದಂತೆ ಘರ್ಜಿಸುತ್ತಾ ಎಲ್ಲರ ನಗೆಗೆ ಪಾತ್ರನಾದನು............ಬಹಳ ಹೊತ್ತಿನ ಮೇಲೆ ಸಭಿಕರೆಲ್ಲರೂ ಹೊರಟುಹೋಮದರಿಂದ ಉಪನ್ಯಾಸವು ತಾನಾಗಿಯೇ ನಿಂತುಹೋಯಿತು.

**ವಿ. ಸೂ. :**—ಉಪನ್ಯಾಸಕನ ಭಾಷಣ ಸರಿಯಾಗಿರಲಿಲ್ಲವಾಗಿ ಸಭಿಕರೆಲ್ಲರೂ ಜಿಗುಪ್ಸಿತರಾಗಿ ಹೊರಟುಹೋದರು.

## ಪ್ರಬಂಧದ ಒಳನೋಟ

ಪ್ರಬಂಧವು ಕಾವ್ಯಾಂಗವೆಂಬುದನ್ನು ನೆನಪಿನಲ್ಲಿಟ್ಟು, ಕಾವ್ಯದಲ್ಲಿ ಬರುವ ದೋಷಗಳ ರೀತಿಯನ್ನು ಪ್ರಬಂಧ ರಚನೆಯಲ್ಲೂ ಅನ್ವಯಿಸಿಕೊಳ್ಳಬೇಕು. ಭಾವೋತ್ಕೃಷ್ಟತೆಗೂ, ಅರ್ಥ ಗೌರವಕ್ಕೂ ಸರಿಯಾದ ಶಬ್ದಾರ್ಥಗಳ ಪ್ರತಿಪಾದನೆಯೇ ಮುಖ್ಯ ಕಾರಣವು. ಪ್ರಬಂಧರಚನೆಯಲ್ಲಿ ವಿದ್ಯಾರ್ಥಿಗಳು ಮೊದಲು ದೋಷ ಭಾಗವನ್ನು ತಿಳಿದರೆ, ಮುಂದೆ ಶಬ್ದಾರ್ಥಗಳನ್ನು ಸರಿಯಾಗಿಡುವುದರಿಂದ ವಾಕ್ಯರಚನೆಯು ಉತ್ತಮಗೊಳ್ಳುವುದಾದುದರಿಂದ ದೋಷಭಾಗವನ್ನು ಮಾಡಲು ಇಲ್ಲಿ ಪ್ರಸ್ತಾಪಿಸಿದೆ.

### ದೋಷಗಳು

ಕಾವ್ಯದ (ಪ್ರಬಂಧದ) ಪದ, ವಾಕ್ಯ, ಅರ್ಥ ಮತ್ತು ರಸಸ್ಥಿತಿಗೆ

ಅನುಸಾರವಾಗಿ, ಅವುಗಳ ದೋಷಗಳನ್ನೂ ವಿಭಾಗಿಸಬಹುದು. ಪದಗಳಿಂದಲೇ ವಾಕ್ಯಗಳಾಗುವುದರಿಂದ ಪದದೋಷಗಳಲ್ಲಿ ಕೆಲವು ವಾಕ್ಯದೋಷಕ್ಕೂ ಅನ್ವಯಿಸುವುವು. ಪದ, ವಾಕ್ಯಗಳು ಸರಿಯಾಗಿದ್ದು, ಅರ್ಥಸ್ಫೂರ್ತಿಯಾಗಲೀ ಚಮತ್ಕಾರ ಜನಕವಾದ ಅರ್ಥವಾಗಲಿ ಇಲ್ಲದಿದ್ದಲ್ಲಿ ಅಂಥವುಗಳಲ್ಲಿ ಕ್ರಮವಾಗಿ ಅರ್ಥದೋಷ ಮತ್ತು ರಸ ದೋಷಗಳಿರುವುವೆಂಬುದನ್ನು ತಿಳಿಯಬೇಕು. ಅಭ್ಯಾಸಿಗಳು ಮೊದಲು ಪದವಾಕ್ಯಗಳ ದೋಷಾದಿಗಳನ್ನು ತಿಳಿದು ನೆಟ್ಟಗೆ ಬರೆಯುವ ಅಭ್ಯಾಸ ಮಾಡಬೇಕು.

## ಪದ ದೋಷ

ಅಕ್ಷರ (ವರ್ಣ) ಗಳನ್ನಾಗಲೀ, ಪದಗಳನ್ನಾಗಲೀ, ತಪ್ಪಾಗಿ ಬರೆಯುವುದರಿಂದ ಪದ ದೋಷವುಂಟಾಗುವುದು. ಕನ್ನಡ ಭಾಷೆಯಲ್ಲಿ ಪ್ರಬಂಧಗಳನ್ನು ಬರೆಯುವಾಗ, ವಿದ್ಯಾರ್ಥಿಗಳು ದೊಡ್ಡ ತರಗತಿಗಳಿಗೆ ಬಂದರೂ, ಚಿಕ್ಕ ತರಗತಿಗಳ ಮಕ್ಕಳು ಮಾಡುವ ಕಾಗುಣಿತದ ತಪ್ಪುಗಳನ್ನು ಮಾಡುತ್ತಿರುವರು. ಸ್ವಭಾಷಾ ವಿಚಾರದಲ್ಲಿ ಈ ವಿಧ ಅಸಡ್ಡೆಯು ದೊಡ್ಡ ತಪ್ಪೆಂದು ತಿಳಿದು ಅವುಗಳನ್ನು ನಿವಾರಿಸಲು ಯತ್ನಮಾಡಬೇಕು. ಸಾಧಾರಣವಾಗಿ ಅವರು ಬರೆವಣಿಗೆಯಲ್ಲಿ ಮಾಡುವ ಕಾಗುಣಿತದ ತಪ್ಪುಗಳನ್ನೂ ಇತರ ಪದದೋಷದ ತಪ್ಪುಗಳನ್ನೂ ಮುಂದೆ ತೋರಿಸಲಾಗಿದೆ.

### (ಅ) ಕಾಗುಣಿತದ ತಪ್ಪುಗಳು

೧) ಸ್ವರ ವ್ಯಂಜನಗಳಲ್ಲಿಯೂ ದೀರ್ಘ ಹ್ರಸ್ವಸ್ವರಗಳಲ್ಲಿಯೂ ಭೇದವಿಡದಿರುವುದು.

| ಮಾಡುವ ತಪ್ಪು | ಇರಬೇಕಾದ ರೂಪ |
|---|---|
| ಯ್ಯಾಕೆ, ಯೆತಕ್ಕೆ | ಏಕೆ, ಏತಕ್ಕೆ |
| ಯಾರಂಭ, ಯಾರಂಬ | ಆರಂಭ |
| ಹಾಗಲಿ | ಆಗಲಿ |

| | |
|---|---|
| ಆಗೆ | ಹಾಗೆ |
| ರುಷಿ, ರಿಷಿ | ಋಷಿ |

೨) ಅಲ್ಪಪ್ರಾಣ ಮಹಾಪ್ರಾಣಾಕ್ಷರಗಳ ವಿನಿಮಯ.

| | |
|---|---|
| ವಿಧ್ಯಾಬ್ಯಾಸ, ಇಧ್ಯಭ್ಯಾಸ, ವಿಧ್ಯಾಭ್ಯಾಸ | ವಿದ್ಯಾಭ್ಯಾಸ |

೩) ಶ–ಸ–ಷ–ಚ–ಟ ಗಳ ಪಲ್ಲಟ.

| | |
|---|---|
| ಶಷ್ಟೀತತ್ಪುರುಷ, ಸಷ್ಟೀತತ್ಪುರ್ಸ | ಷಷ್ಠೀತತ್ಪುರುಷ |
| ಉಚ್ಛವ | ಉತ್ಸವ |
| ಸೊಲ್ಪ, ಷ್ವಲ್ಪ, ಶ್ವಲ್ಪ | ಸ್ವಲ್ಪ |

೪) ಒತ್ತಕ್ಷರದಲ್ಲಿ ವಿಚಿತ್ರ ರೂಢಿ.

| | |
|---|---|
| ಬೃಹ್ಮ, ಬ್ರಂಹ, ಬರ್ಮ್ಹ | ಬ್ರಹ್ಮ |
| ಬಹ್ರುವೀಹಿ | ಬಹುವ್ರೀಹಿ |
| ಮಧ್ಯಾನ್ಹ | ಮಧ್ಯಾಹ್ನ |

೫) ಅನುಸ್ವಾರ ವಿಸರ್ಗಗಳ ಅನುನಾಸಿಕಗಳ ವ್ಯತ್ಯಸ್ಥ.

| | |
|---|---|
| ಅಂತಕಃರಣ, ಅಂತ್ಹಕರಣ | ಅಂತಃಕರಣ |
| ದುಖಃ, ದುಕ್ಖ | ದುಃಖ |
| ಸಮ್ಮಂದ, | ಸಮ್ಬನ್ಧ ಸಂಬಂಧ |
| ಕಾನ್ಡ | ಕಾಂಡ |

## (ಆ) ಗ್ರಾಮ್ಯ—(ಹಳ್ಳಿಯ ಮಾತುಗಳು)

ಉದಾ.—ಹೊತ್ತಾರೆ ಎದ್ದು ಹೈಕಳು ಸುಮ್ಕೆ ಕೂಕಂಡ್ರೆ ಯಿದ್ಯಾ ಬರ್ತೈತಾ? (ತಪ್ಪು)

ಬೆಳಗ್ಗೆ ಎದ್ದು ಹುಡುಗರು ಸುಮ್ಮನೆ ಕುಳಿತು ಕೊಂಡರೆ ವಿದ್ಯೆ ಬರುತ್ತದೆಯೇ?

## (ಇ) ವ್ಯಾಕರಣ ವಿರುದ್ಧ

(ಸಂಧಿ, ವಿಸಂಧಿಗಳ ತಿಳುವಳಿಕೆಯಿಲ್ಲದಿರುವುದೂ, ಇತರ ಅಶುದ
ಪ್ರಯೋಗಮಾಡುವುದು) ಉದಾ.—

[ತಪ್ಪು ರೂಪ] ಮನೆಅಲ್ಲಿರದೆ ಇಷ್ಟು ಕಾಲೆಲ್ಲಿದ್ದೆ?
[ಸರಿಯಾದ ರೂಪ] ಮನೆಯಲ್ಲಿರದೆ ಇಷ್ಟು ಕಾಲ ಎಲ್ಲಿದ್ದೆ ?

## (ಈ) ರೂಢಿ ವಿರುದ್ಧ

(ಬಳಕೆಯಲ್ಲಿಲ್ಲದ ಸ್ವಂತ ಕಲ್ಪನೆಯ ಮಾತುಗಳು ಮತ್ತು ಅಕ್ರಮ
ರೀತಿ) ಉದಾ.—

ಬ್ರಾಹ್ಮಣತನ (ತಪ್ಪು) ಬ್ರಾಹ್ಮಣ್ಯ (ಸರಿ)
ಮಾಡಿದ ಮಾದ ಕೆಲಸವನ್ನು (ಅಕ್ರಮ)
ಮಾದನು ಕೆಲಸವನ್ನು ಮಾಡಿದನು. (ಕ್ರಮ)

## (ಉ) ಅನ್ಯ ಭಾಷಾ ಪದ ಪ್ರಯೋಗ

ಉದಾ.—ಸ್ಕೂಲ್ ಬೆಲ್ ಆಗೋ ಟೈಮಾಯ್ತು.
ಬೆಂಗಳೂರು ರೋಡಿನಲ್ಲಿ ವಾಕಿಂಗ್ ಹೋಗೋಣ.
[ಆಂಗ್ಲ ಪದಗಳು—ಸ್ಕೂಲ್=ಶಾಲೆ, ಬೆಲ್=ಘಂಟೆ, ಟೈಮ್=
ಕಾಲ, ರೋಡ್=ರಸ್ತೆ, ವಾಕಿಂಗ್=ಗಾಳೀಸಂಚಾರ.

## ವಾಕ್ಯದೋಷ

ಪದಗಳಲ್ಲಿ ದೋಷವಿದ್ದರೆ ಪದದೋಷದೊಂದಿಗೆ ವಾಕ್ಯದೋಷವು
ಅದರಿಂದಲೇ ಅರ್ಥದೋಷವೂ ಹುಟ್ಟುವುವು. ಇದರ ಜೊತೆಯಲ್ಲಿ ಅಕ್ರಮ
ಅಸಂಬದ್ಧ, ಶಬ್ದಾಡಂಬರ ಮತ್ತು ಅಶ್ಲೀಲತೆಗಳೇ ಮೊದಲಾದ ದೋಷಗಳನ್ನು
ಲೇಖಕರು ಮಾಡುವುದರಿಂದ ಅವುಗಳನ್ನು ಬಿಡಲು ಯತ್ನಿಸಬೇಕು. ಗ್ರಂ
ವಿಸ್ತಾರ ಭಯದಿಂದ ಒಂದೆರಡು ಮಾತಿನಲ್ಲಿ ಇವುಗಳ ವಿಚಾರವನ್ನು ತಿಳಿಸಿದೆ

ವಾಕ್ಯದಲ್ಲಿ ಕರ್ತೃ, ಕರ್ಮ, ಕ್ರಿಯೆಗಳನ್ನೂ ಅವುಗಳ ವಿಶೇಷಣಗಳನ್ನೂ ಸರಿಯಾದ ರೀತಿಯಲ್ಲಿಡದಿದ್ದರೆ ಅಕ್ರಮವೂ ಹೇಳಬೇಕಾದ ವಿಚಾರವನ್ನು ಮರೆತು ಬೇರೆ ವಿಚಾರವೆತ್ತಿದರೆ ಅಸಂಬದ್ಧವೂ, ವಿವಿಧ ಕರ್ತೃ ಕ್ರಿಯೆ ಸರ್ವನಾಮಗಳನ್ನು ಉಪಯೋಗಿಸದಿರುವುದರಿಂದ ಪುನರುಕ್ತಿ ದೋಷವೂ ವಿಶೇಷಪದ ಅಥವಾ ಕ್ಲಿಷ್ಟ ಪದಗಳಿಂದ ಶಬ್ದಾಡಂಬರವೂ, ಕೀಳ್ತರಗತಿಯ ಅಸಹ್ಯ ಗ್ರಾಮ್ಯ ಮಾತುಗಳಿಂದ ಅಶ್ಲೀಲವೂ ತೋರಿಬಂದು ವಾಕ್ಯದೋಷಕ್ಕೆ ಕಾರಣವಾಗುವುದು.

## ಗುಣಭಾಗ

ಮೇಲ್ಕಂಡ ಶಬ್ದಾರ್ಥ ದೋಷಗಳಿಲ್ಲದೆ ಇತರ ಗುಣಗಳಿಂದ ಒಪ್ಪಿ ಬರೆಯಲ್ಪಡುವ ವಾಕ್ಯರಚನೆಯು ಉತ್ತಮ ರೀತಿಯಲ್ಲಿರುವುದು. ಈ ಗುಣಗಳಲ್ಲೈಕೆ ಸುಶಬ್ದತೆ (ಶುದ್ಧವಾದ ಶಬ್ದಪ್ರಯೋಗ) ಮತ್ತು ಲಾಲಿತ್ಯ (ಓದಿದ ಕೂಡಲೇ ಸುಲಭವಾಗಿ ಅರ್ಥವಾಗುವಿಕೆ) ಎಂಬ ಇವೆರಡು ಪ್ರಬಂಧ ರಚನಾ ಶೈಲಿಗೆ ಅತ್ಯಾವಶ್ಯಕಗಳು. ಬರೆವಣಿಗೆಯ ರೀತಿಯನ್ನು ಶೈಲಿಯೆಂದು ಕರೆಯುವರು. ಶೈಲಿಯು ಪ್ರಬಂಧಕಾವ್ಯದ ಆತ್ಮವು.

ಒಳ್ಳೆಯ ಪ್ರಬಂಧದಲ್ಲಿ **ಶೈಲಿ, ಐಕ್ಯ** ಅಥವಾ **ಏಕೀಭಾವ, ಕ್ರಮ, ಸಂಕ್ಷೇಪಕಥನ** ಮತ್ತು **ವ್ಯಕ್ತಿತ್ವ**ಗಳೆಂಬ ಐದು ಗುಣಗಳು ಇರಬೇಕೆಂದು ಆಧುನಿಕ ನಿಬಂಧಕಾರರು ಅಭಿಪ್ರಾಯಪಡುತ್ತಾರೆ. ಆದಕಾರಣ ಇವುಗಳ ಪ್ರತಿಯೊಂದರ ಲಕ್ಷಣವನ್ನೂ ತಿಳಿಯಬೇಕಾಗಿದೆ.

### ೧. ಶೈಲಿ

ಬುದ್ಧಿಗೆ ಹೊಳೆಯುವ ಆಲೋಚನೆಗಳನ್ನಾಗಲೀ ಮನಸ್ಸಿನಲ್ಲಿ ಹುಟ್ಟುವ ಕಲ್ಪನೆಗಳನ್ನಾಗಲೀ ಸರಿಯಾದ ರೀತಿಯ ಮಾತಿನಲ್ಲಿ ಇಡುವ ರೀತಿಗೆ 'ಶೈಲಿ' ಎಂದು ಹೆಸರು. ಹಿಂದೆಯೇ ತಿಳಿಸಿರುವಂತೆ ಶೈಲಿಯು ಸರಿಯಾಗಿರಲು ಅದು ಸುಲಭಾರ್ಥವಾಗುವಂತೆಯೂ ಶುದ್ಧವಾದ ಪದರಚನೆಗಳಿಂದ ಕೂಡಿದುದಾಗಿಯೂ ಇರಬೇಕು. ಶೈಲಿಯು ವ್ಯಕ್ತಿಯ ಪಾಂಡಿತ್ಯ ಪ್ರತಿಭೆಗಳಿಗೆ ತಕ್ಕಂತೆ

ಇರುವುದು. ಶೈಲಿಯ ಮುಖ್ಯ ಗುರಿಯು ಆನಂದ. ಆದುದರಿಂದ ನಿರ್ಬಂಧದಲ್ಲಿ ಓದುಗರ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡದ ಶೈಲಿಯು ಪ್ರಯೋಜನಕ್ಕೆಬಾರದು.

ವಿದ್ಯಾರ್ಥಿಗಳು ಪ್ರಬಂಧವನ್ನು ಬರೆಯುವಾಗ ಶೈಲಿಗೆ ಸಂಬಂಧಪಟ್ಟ ಕೆಲವು ವಿಚಾರಗಳನ್ನು ಗಮನಿಸಬೇಕು. ಪ್ರಬಂಧಗಳ ಶೈಲಿಯು ಮಾತನಾಡುವ ರೀತಿಯಲ್ಲಾಗಲೀ, ಸ್ನೇಹಿತರಿಗೆ ಬರೆಯುವ ಪತ್ರಲೇಖನಗಳ ರೀತಿಯಲ್ಲಾಗಲೀ, ಅಶ್ಲೀಲ ಮತ್ತು ಗ್ರಾಮ್ಯವಚನಗಳಿಂದ ಕೂಡಿದುದಾಗಲೀ ಇರಕೂಡದು. ಶೈಲಿಯು ಲೇಖಕನ ಯೋಗ್ಯತೆಯನ್ನು ಹೊರಗೆಡವುವಂತಿರಬೇಕು. ಉಪಯೋಗಿಸುವ ಭಾಷೆ ಮತ್ತು ವಾಕ್ಯರಚನೆಗಳು ಶುದ್ಧವೂ ಸರಳವೂ ಮತ್ತು ನೇರವೂ ಆದ ರೀತಿಯಲ್ಲಿರಬೇಕು.

ವಿದ್ಯಾರ್ಥಿಗಳ ಶಾಲಾಪ್ರಬಂಧಗಳ ಶೈಲಿಯೇ ಬೇರೆಯಾದರೂ ಅವರು ತಾವು ಓದುವ ತರಗತಿಯ ದರ್ಜೆಗಾದರೂ ತಮ್ಮ ಬರೆವಣಿಗೆಯ ಶೈಲಿಯನ್ನು ಉತ್ತಮ ರೀತಿಯಲ್ಲಿಟ್ಟುಕೊಳ್ಳಬೇಕಾದುದು ಮುಖ್ಯ ಕರ್ತವ್ಯವಾಗಿದೆ.

## ೨. ಐಕ್ಯತೆ ಅಥವಾ ಏಕೀಭಾವ

ಒಂದು ಪ್ರಧಾನ ವಿಷಯವನ್ನು ಕುರಿತು ಬರೆಯುವಾಗ ನಮ್ಮ ಬುದ್ಧಿಗೆ ಹೊಳೆಯುವ ಆಲೋಚನೆಗಳನ್ನು ಕ್ರಮವರಿತ ಭಾಗಗಳನ್ನಾಗಿ ವಿಂಗಡಿಸಿಕೊಂಡು ಅವುಗಳನ್ನು ಬೇರೆ ಬೇರೆ ವಾಕ್ಯಗಳಲ್ಲೂ ಮತ್ತು ವಾಕ್ಯಬೃಂದಗಳಲ್ಲೂ ಇಡುತ್ತೇವೆ. ಹೀಗೆ ಬರೆಯುವಾಗ ವಾಕ್ಯಗಳು ಒಂದು ವಾಕ್ಯಬೃಂದಕ್ಕೂ, ವಾಕ್ಯಬೃಂದಗಳು ಒಂದು ವಿಷಯಕ್ಕೂ, ಸಂಬಂಧಪಟ್ಟಿರುವಂತೆ ನೋಡಿಕೊಳ್ಳಬೇಕು. ಹೀಗೆ ಒಂದು ಮುಖ್ಯ ಉದ್ದೇಶವನ್ನಿಟ್ಟುಕೊಂಡು ಒಂದೇ ವಿಷಯವನ್ನು ಕುರಿತು ವಿವರಿಸುವ ಭಾಗವನ್ನು ಐಕ್ಯವೆನ್ನುವರು. ಒಂದು ಗೊತ್ತಾದ ವಿಷಯವನ್ನು ಅನೇಕ ದೃಷ್ಟಿಯಿಂದ ಅನೇಕ ವಿಧವಾಗಿ ಹೇಳಬಹುದು. ಆದರೂ ಮೊದಲಿನಿಂದ ಕೊನೆಯವರೆಗೂ ವಿಷಯದ ಕಡೆ

ಗಮನವಿರಬೇಕು. ಪ್ರಬಂಧದ ಬರೆವಣಿಗೆಯಲ್ಲಿ ಅನೇಕ ವಿಷಯಗಳಿರ ಬಹುದಾದರೂ ಅದರಲ್ಲಿ ಅಸಂಬದ್ಧ ವಿಷಯಗಳಿರಕೂಡದು. ಹೀಗೆ ಪ್ರಬಂಧ ದಲ್ಲಿ ಒಂದೊಕ್ಕೊಂದು ಸಂಬಂಧಿಸಿದಂತೆ ಚಿಕ್ಕ ವಾಕ್ಯಗಳಿದ್ದಷ್ಟೂ ಐಕ್ಯತೆಯು ಏರ್ಪಡುವುದು.

## ೩. ಕ್ರಮ

ಪ್ರಬಂಧದಲ್ಲಿ ನಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವುದರಲ್ಲಿ ಒಂದು ಕ್ರಮವಿರಬೇಕು. ಅದು ಅಲ್ಲಲ್ಲಿಯೇ ಪೂರ್ಣವಾಗಿರಬೇಕು. ಮೊದಲೇ ಯೋಚಿಸಿ ಬರೆಯುವುದರಿಂದ ಕ್ರಮವು ಸರಿಯಾಗುವುದು. ಒಂದೊಂದು ಭಿನ್ನವಿಷಯವಲ್ಲೂ ಮತ್ತು ಅವುಗಳನ್ನು ಪ್ರತಿಪಾದನೆ ಮಾಡುವ ರೀತಿ ಯಲ್ಲೂ ಕ್ರಮವಿರಲಿ. ತೋಚಿದ ಅಭಿಪ್ರಾಯಗಳನ್ನು ಹಾಗೆಯೇ ಇಡ ಬಾರದು. ಇವುಗಳ ಜೊತೆಗೆ ಶಬ್ದ ಮತ್ತು ಅರ್ಥಗಳೆರಡರಲ್ಲೂ ಕ್ರಮವಿರ ಬೇಕೆಂಬುದನ್ನು ಮರೆಯಬಾರದು. (೧) ಶಬ್ದಕ್ರಮವೆಂದರೆ ಕರ್ತೃ—ಕರ್ಮ ಕ್ರಿಯೆಗಳೂ ಮತ್ತು ಅವುಗಳ ವಿಶೇಷಣಗಳೂ ಒಂದು ಕ್ರಮದಲ್ಲಿರುವಿಕೆ. (೨) ಒಂದೇ ವಿಧವಾದ ಭಾವನೆಗಳೂ ಸಂಗತಿಗಳೂ ಒತ್ತಟ್ಟಿಗಿದ್ದು, ಒಂದಾದ ಮೇಲೊಂದು ಅಳವಡಿಸಿಕೊಳ್ಳುವ ವಿಧಾನವು ಅರ್ಥಕ್ರಮವು. ಪ್ರಬಂಧದ ಶಬ್ದಾರ್ಥಗಳೆರಡರಲ್ಲೂ ಕ್ರಮವಿರಬೇಕಲ್ಲದೆ ವಾಕ್ಯಗಳೂ ಮತ್ತು ವಾಕ್ಯಬೃಂದ ಗಳೂ ಕ್ರಮ ಜೋಡಣೆಗಳಿಂದ ಕೂಡಿರಬೇಕೆಂದು ಗಮನಿಸಬೇಕು.

## ೪. ಸಂಕ್ಷೇಪ ಕಥನ

ಪ್ರಬಂಧವನ್ನು ಅತಿ ಉದ್ದವಾಗಿ ಬರೆಯುತ್ತಾ ಹೋದಹಾಗೆಲ್ಲಾ ಬರೆಯಬೇಕಾದ ಸಂಗತಿಗಳೇ ಬಿಟ್ಟು ಹೋಗುವುದಲ್ಲದೆ ಅಸಂಬದ್ಧ ವಿಚಾರ ಗಳೂ ಪುನರುಕ್ತಿಯೇ ಮೊದಲಾದ ದೋಷಗಳೂ ಬಂದು ಅವುಗಳನ್ನು ಕೇಳಲು ಮತ್ತು ಓದಲು ಬೇಜಾರಾಗುವುದು. ಅತಿ ಚಿಕ್ಕದಾಗಿದ್ದರೂ ವಿಷಯವೇ ಇಲ್ಲದೆ ಹೋಗಿ ಲೇಖಕನ ಅಸಾಮರ್ಥ್ಯವು ಹೊರಬೀಳುವುದು. (ಅವುಗಳನ್ನು ಮರೆಮಾಚುವುದಕ್ಕಾಗಿ ವಿದ್ಯಾರ್ಥಿಗಳು ಪ್ರಬಂಧ ಬರೆವಣಿಗೆ

ಗಳಲ್ಲಿ ತಮಗೆ ಕಾಲ ಸಾಲದು, ಮರೆತುಬಿಟ್ಟೆ ಕ್ಷಮಿಸಿ ಮುಂತಾದ ಹೇಳಿಕೆ ಗಳನ್ನು ಕೊಡುವರು. ಇದು ಶುದ್ಧ ಅವಿವೇಕದ ತಪ್ಪು)

ಪ್ರಬಂಧವನ್ನು ಸಂಕ್ಷೇಪಿಸಿ ಹೇಳುವುದು ಕೊಟ್ಟ ವಿಷಯದ ಮೇಲೆ ಹೋಗುತ್ತದೆ. ವಿದ್ಯಾರ್ಥಿಗಳು ಶಾಲೆಗಳ ಪ್ರಬಂಧಗಳನ್ನು ಬರೆಯಬೇಕಾ ದಾಗ ಹೇಳಬೇಕಾದ ಪ್ರತಿಯೊಂದು ಸಂಗತಿಯನ್ನೂ ಬಿಡದೆ ಕೊಟ್ಟಕಾಲಕ್ಕೆ ಸರಿಯಾಗಿ ಪುನರಾವೃತ್ತಿಗೆ ಕಾಲಸಾಕಾಗುವಷ್ಟು ಮುಂಚೆಯೇ ಮುಗಿಯು ವಂತೆ ವಿಷಯಗಳನ್ನು ಸಿದ್ಧಮಾಡಿಕೊಂಡು ಯೋಚಿಸಿ ಬರೆಯಬೇಕು.

ಪ್ರಬಂಧ ಬರೆಯಬೇಕಾದಾಗ ವಿಷಯದ ಪ್ರತಿಯೊಂದು ಭಾಗವನ್ನೂ ಸಮಯೋಚಿತವಾಗಿ ಸಂಕ್ಷೇಪಿಸುತ್ತಾ ಬಂದರೆ ಗೊತ್ತಾದ ವಿಷಯವನ್ನು ಸಂಕ್ಷೇಪ ರೀತಿಯಲ್ಲಿ ಬರೆಯಲವಕಾಶವುಂಟಾಗುವುದು. ಕನ್ನಡಕ್ಕೆ ಕೆಲವು ಸಮಾಸ ಪದಗಳನ್ನು ಸೇರಿಸುವುದರಿಂದ ಶಬ್ದಗಳ ಸಂಕ್ಷೇಪವೂ, ಮಿಶ್ರ ಮತ್ತು ಸಂಯೋಜಿತ ವಾಕ್ಯಗಳಿಗೆ ಬದಲಾಗಿ ಸಾಮಾನ್ಯ ವಾಕ್ಯವನ್ನುಪಯೋಗಿಸು ವುದರಿಂದ ವಾಕ್ಯಸಂಕ್ಷೇಪವೂ ಏರ್ಪಡುವುವು. (ಸಮಾಸ ಪದಕ್ಕೆ ಉದಾ ಮನೆಯಲ್ಲಿ ಮಾಡುವ ಕೆಲಸಕ್ಕೆ ಬದಲಾಗಿ "ಮನೆಗೆಲಸ" ಎಂಬಂತೆ.) ವಾಕ್ಯಸಂಕ್ಷೇಪಕ್ಕೆ ವಾಕ್ಯಸಂಯೋಜನೆ ನೋಡಿ.

## ವ್ಯಕ್ತಿತ್ವ

ಒಂದು ಗೊತ್ತಾದ ವಿಷಯವನ್ನು ಕುರಿತು ಬರೆಹಗಾರನ ವ್ಯಕ್ತಿತ್ವ ಹೊಂದಿದ ಬರೆವಣಿಗೆಯೇ ಸರಿಯಾದ ಪ್ರಬಂಧವೆನಿಸುವುದು. ಸ್ವಂತ ಸೂಚನೆ ಗಳಿಲ್ಲದ ಪ್ರಬಂಧವು ನಿಸ್ಸತ್ವವಾದುದಾಗಿ ವೈಶಿಷ್ಟ್ಯ ಹೊಂದಲಾರದು. ಮತ್ತೊಬ್ಬರು ಹೇಳಿದ ವಿಚಾರಗಳಿಂದ ತೃಪ್ತಿ ಹೊಂದದೆ ತಮ್ಮ ಆಲೋ ಚನೆಗಳನ್ನೂ ಮತ್ತು ಭಾವನೆಗಳನ್ನೂ ಪ್ರಬಂಧದಲ್ಲಿ ಜಾಣ್ಮೆಯಿಂದ ವ್ಯಕ್ತ ಪಡಿಸಬೇಕು. ಇದರಿಂದ ಓದುವವರಿಗೆ ಬರೆಹಗಾರನ ಸ್ವಂತಶಕ್ತಿಯ ಮಾರ್ಗ ತಿಳಿಯುವುದು. ಲೇಖನದಲ್ಲಿ ಗೊತ್ತಾಗುವ ಅರ್ಥ ಗೌರವವಾಗಲಿ ಭಾವೋ ತ್ಕೃಷ್ಟತೆಯಾಗಲೀ ಲೇಖಕನು ಚಾತುರ್ಯದಿಂದ ಪ್ರಕಾಶಮಾಡುವ ರೀತಿ ಯನ್ನನುಸರಿಸುತ್ತದೆ.

ನಿಬಂಧವು ಜನಸಾಮಾನ್ಯಕ್ಕೆ ಪ್ರಿಯವಾಗಲು ಅವುಗಳಲ್ಲಿರುವ ಸ್ವಂತ ಪ್ರತಿಪಾದನಾಶಕ್ತಿಯೇ ಕಾರಣ. ಮೇಲ್ಕಂಡಕಾರಣಗಳಿಂದ ಪ್ರಬಂಧವು ಓದುವವರಿಗೆ ಪ್ರಿಯವಾಗಿರಬೇಕಾದರೆ ವ್ಯಕ್ತಿತ್ವವು ಕೂಡ ಸುಲಭಾರ್ಥವಾಗುವಂತೆಯೂ ಸತ್ಯಾಂಶಗಳಿಂದ ಕೂಡಿದುದಾಗಿಯೂ ಇರಬೇಕೆಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು.

## ಉತ್ತಮ ಪ್ರಬಂಧ ರೀತಿ

ಒಟ್ಟಿನಲ್ಲಿ ಪ್ರಬಂಧವು ತನ್ನದೇ ಆದ (ವ್ಯಕ್ತಿತ್ವ) ವೈಶಿಷ್ಟ್ಯವುಳ್ಳದ್ದಾಗಿಯೂ, ಸಂಕ್ಷೇಪವಾದುದಾಗಿಯೂ, ಕ್ರಮವುಳ್ಳದ್ದಾಗಿಯೂ, ಏಕಾಭಿಪ್ರಾಯವುಳ್ಳದ್ದಾಗಿಯೂ ಮತ್ತು ಒಳ್ಳೆಯ ಶೈಲಿಯಿಂದ ಕೂಡಿದುದಾಗಿಯೂ ಇರಬೇಕೆಂದಾಯಿತು. ಮೇಲಾಗಿ ಪ್ರಬಂಧವು ಚೆನ್ನಾಗಿರಬೇಕಾದರೆ ಸರಿಯಾಗಿ ಒಪ್ಪುವ ವಿಷಯ ವಿವರಣೆಯೂ ಕ್ರಮವಾದ ಜೋಡಣೆಯೂ ಮತ್ತು ಸಾಕಷ್ಟು ಪ್ರತಿಪಾದನಾಶಕ್ತಿಯೂ ಅತ್ಯಾವಶ್ಯಕವೆಂಬುದನ್ನು ಮರೆಯಬಾರದು.

## ಪ್ರಬಂಧದ ವಿಭಾಗಗಳು

ವಿಷಯಗಳಿಗೆ ತಕ್ಕ ಹಾಗೆ ಕೆಳಗೆ ಕಂಡಂತೆ ಪ್ರಬಂಧವನ್ನು ಐದು ವಿಧವಾಗಿ ವಿಂಗಡಿಸಬಹುದು.

೧) ವರ್ಣನಾಪರ. ೨) ಕಥನಪರ.

೩) ಚಿಂತನಾಪರ. ೪) ವಿವರಣಪರ.

೫) ಕಲ್ಪನಾಪರ.

### ೧) ವರ್ಣನಾಪರ

ಯಾವುದಾದರೊಂದು ವಸ್ತು, ಪ್ರದೇಶ, ದೃಶ್ಯ ಮತ್ತು ಇತರ ಪದಾರ್ಥಗಳನ್ನು ವಿವರಿಸಿ ಹೇಳುವುದು.

ಉದಾ:

೧) ಪ್ರಾಣಿ. (ಹಸು, ಆನೆ, ಕುದುರೆ)

೨) ವನಸ್ಪತಿ. (ಗಿಡಮರಬಳ್ಳಿಗಳು)

೩) ಖನಿಜ. (ಚಿನ್ನ, ಬೆಳ್ಳಿ, ಕಬ್ಬಿಣ)

೪) ಹಳ್ಳಿ, ಪಟ್ಟಣ, ದೇಶಕಟ್ಟಡಗಳು.

೫) ಪ್ರಾಕೃತಿಕ ನೋಟ. (ನದಿ, ಜಲಪಾತ, ವನ, ಪರ್ವತ)

೬) ತಯಾರಾದ ವಸ್ತುಗಳು. (ಗಾಜು, ಕಾಗದ)

**೨) ಕಥನಪರ ಪ್ರಬಂಧ.**

ಯಾವುದಾದರೊಂದು ಅಥವಾ ಅನೇಕ ಸಂಗತಿಗಳ ಬರೆವಣಿಗೆ.

ಉದಾ;

೧) ಚರಿತ್ರೆ. (ಶ್ರೀಹರ್ಷ, ಅಶೋಕ)

೨) ಪುರಾಣ. (ಮಹಾಭಾರತ, ಭಾಗವತಾದಿಗಳು)

೩) ಕಥೆ. (ನಿಜವಾದ ಅಥವಾ ಕಟ್ಟುಕಥೆಗಳು)

೪) ಜೀವನ ಚರಿತ್ರೆ. (ತನ್ನ ಅಥವಾ ಇತರರ ಕಥೆ)

೫) ಪ್ರಯಾಣ. (ಹತ್ತಿರದ ಅಥವಾ ದೂರದ ಸಂಚಾರ)

೬) ವೃತ್ತಾಂತಗಳು.

೭) ಅನಾಹುತಗಳು. (ಪ್ರವಾಹ, ಬೆಂಕಿ)

**೩) ಚಿಂತನಪರ ಪ್ರಬಂಧ**

ರೂಪವಿಲ್ಲದ ಗಹನ ವಿಚಾರಗಳನ್ನು ಎಂದರೆ ಸತ್ಯ, ನೀತಿ, ಧರ್ಮ ಮೊದಲಾದ ಕಣ್ಣಿಗೆ ಕಾಣದ ಅಂಶಗಳನ್ನು ಕುರಿತು ಸ್ವಂತ ಭಾವನೆ ಮತ್ತು ಆಲೋಚನೆಗಳಿಂದ ವಿಮರ್ಶಿಸಿ ಬರೆಯುವುದು.

ಉದಾ:

೧) ಅಭ್ಯಾಸ ಮತ್ತು ಗುಣಗಳಿಗೆ ಸಂಬಂಧಪಟ್ಟವು. (ಸತ್ಯ, ಮಿತವ್ಯಯ, ಧೈರ್ಯ ಇತ್ಯಾದಿ)

೨) ಸಾಮಾಜಿಕ, ರಾಜಕೀಯ ಮತ್ತು ಗೃಹಕಾರ್ಯಕ್ಕೆ ಸಂಬಂಧಿಸಿದವು. (ಐಶ್ವರ್ಯ, ಬಡತನ, ಸರ್ಕಾರ, ಸ್ವಾತಂತ್ರ್ಯ, ಸಾಂಸಾರಿಕ ಜೀವನ, ವಿದ್ಯಾಭ್ಯಾಸ, ಮದುವೆ ಮುಂತಾದುವು.)

೩) ವೇದಾಂತ ವಿಷಯಗಳು. (ತತ್ವಗಳು, ಭಕ್ತಿಮಾರ್ಗ)

೪) ಮತವಿಚಾರಗಳು. (ಕ್ರೈಸ್ತ ಮತ್ತು ಬೌದ್ಧಮತಗಳು)

## ೪ ವಿವರಣಪರ ಪ್ರಬಂಧ.

ಚಮತ್ಕಾರವಾಗಿ ಯಾವುದಾದರೊಂದು ವಿಷಯವನ್ನು ಕುರಿತು ವಿವರಿಸಿ ಹೇಳುವುದು.

ಉದಾ:

೧) ಸಂಸ್ಥೆ ಅಥವಾ ಸಭೆ (ಪೌರಸಭೆ, ವಿಶ್ವವಿದ್ಯಾನಿಲಯ)

೨) ಕೈಗಾರಿಕೆಗಳು: (ರೇಷ್ಮೆ, ಸಕ್ಕರೆ, ಕಾಗದ, ಗಾಜು)

೩) ಉದ್ಯೋಗ, (ವ್ಯವಸಾಯ, ಕೈಕಸುಬು)

೪) ವಿಜ್ಞಾನ ವಿಚಾರ. (ವಿದ್ಯುಚ್ಛಕ್ತಿ, ವಿಮಾನ)

೫) ಸಾಹಿತ್ಯ ವಿಚಾರ, (ಕವಿ ವಿಚಾರ, ಕನ್ನಡ ಸಾಹಿತ್ಯ)

## ೫ ಕಲ್ಪನಾಪರ ಪ್ರಬಂಧ.

ಯಾರಾದರೊಬ್ಬರ ಅಥವಾ ಯಾವುದಾದರೊಂದರ ಅನುಭವಗಳನ್ನು ಕಲ್ಪಿಸಿಕೊಂಡು ಬರೆಯುವುದು.

ಉದಾ:

೧) 'ನಾನು ಮಂತ್ರಿಯಾಗಿದ್ದರೆ ಎಂಬ ರೀತಿಯವು'

೨) ಪ್ರಾಣಿಗಳ ಆತ್ಮಚರಿತ್ರೆಯನ್ನು ಲೇಖಕನು ಊಹಿಸಿ ನಿಜವಾದ ರೀತಿಯಲ್ಲಿ ಚಿತ್ರಿಸುವುದು.

೩) ಲೇಖಣಿ, ಮೋಟಾರು ಮೊದಲಾದುವುಗಳ ಮೇಲೆ ಹರಟೆ.

೪) ಸ್ವಪ್ನ ವೃತ್ತಾಂತಗಳು ಮತ್ತು ಕಲ್ಪಿತ ಕಥೆಗಳು.

## ಪ್ರಬಂಧ ವಿಷಯ ಮತ್ತು ಸಾಮಗ್ರಿ.

ಪ್ರಬಂಧಕ್ಕೆ ಒಳಗಾಗದ ವಿಷಯವೇ ಇಲ್ಲ. ಒಂದು ಸಣ್ಣ ವಿಷಯವನ್ನು ಹಿಡಿದು ಅತಿಗಹನವಿಚಾರದವರೆಗೆ ಯಾವ ವಿಷಯವನ್ನು ಕುರಿತು ಬೇಕಾದರೂ ನಿಬಂಧವನ್ನು ರಚಿಸಬಹುದು. ಕೇಶಿರಾಜನೆಂಬ ಕವಿಯು ಹೇಳಿರುವಂತೆ 'ಪ್ರತಿಭೆಯುಂ, ಅಭ್ಯಾಸಮುಂ, ವಿದ್ವತ್ಸೇವೆಯುಂ ಕಾವ್ಯ ಪರಿಚಯಮುಂ ಕವಿತೆಗೆ ಕಾರಣಂ' ಎಂಬ ಸಾರವತ್ತಾದ ಮಾತನ್ನೇ ಪ್ರಬಂಧ ಬರೆವ ಶಕ್ತಿಗೂ ಅನ್ವಯಿಸಿಕೊಳ್ಳಬಹುದು. ಲೇಖಕರಿಗೆ ವಿಷಯ ಜ್ಞಾನವಿದ್ದರೆ ಮತ್ತೊಬ್ಬರಿಗೆ ಹೇಳಬೇಕೆಂದಿರುವ ಅಭಿಪ್ರಾಯಗಳನ್ನು ಹೇಗಾದರೂ ಮಾಡಿ ಭಾಷೆಯ ಮೂಲಕ ವ್ಯಕ್ತಪಡಿಸಿರುವರು. ಯಾವ ಪ್ರಬಂಧ ಲೇಖನಕ್ಕಾದರೂ ಮೊದಲು ಮೇಲೆ ಹೇಳಿದಂತೆ ಕಾವ್ಯವ್ಯಾಸಂಗದಿಂದಲೂ, ತಿಳಿದವರಮೂಲಕ ಕಲಿಯುವುದರಿಂದಲೂ, ಅಭ್ಯಾಸಬಲದಿಂದಲೂ ಜ್ಞಾಪಕಶಕ್ತಿಯಿಂದಲೂ, ವಿಷಯಸಂಗ್ರಹಮಾಡಿ, ಅನಂತರವೇ ಬರೆವಣಿಗೆಯನ್ನು ಪ್ರಾರಂಭಿಸಬೇಕು. ಇವೇ ಪ್ರಬಂಧದ ಸಾಧನಗಳು.

### ೧. ಕಾವ್ಯವ್ಯಾಸಂಗ

ಕಾವ್ಯವೆಂದರೆ ಬರಿಯ ಕಥೆ: ಕಾದಂಬರಿಗಳಲ್ಲ. ಹಿಂದೆಯೇ ತಿಳಿಸಿದಂತೆ ಎಲ್ಲ ಸಾಹಿತ್ಯಗಳ ಪರಿಚಯವನ್ನೂ ಮಾಡಿಕೊಳ್ಳ ಬೇಕು. ಚರಿತ್ರೆ, ಆತ್ಮಕಥೆ, ವಿಜ್ಞಾನ ಮತ್ತು ಸಾಹಿತ್ಯ ಮುಂತಾದ ಉತ್ತಮ ಲೇಖನಗಳನ್ನು ಅನೇಕ ಗ್ರಂಥಗಳ ಮತ್ತು ಪತ್ರಿಕೆಗಳ ವ್ಯಾಸಂಗ ಮಾಡುವುದರಿಂದ ಪ್ರಬಂಧದ ಬರೆವಣಿಗೆಗೆ ಬೇಕಾದ ಸಾಮಗ್ರಿಗಳನ್ನು ಒದಗಿಸಿಕೊಳ್ಳಬಹುದು. (ಉದಾ; ಚರಿತ್ರೆಗಳಿಗೆ ಸಂಬಂಧಿಸಿದ ವಿಷಯವನ್ನು ಬರೆಯ

ಬೇಕಾದಾಗ ಚರಿತ್ರೆಯ ಪುಸ್ತಕಗಳನ್ನು ಓದಿಯೇ ತೀರಬೇಕು.) ಹೀಗೆ ಗ್ರಂಥ ವ್ಯಾಸಂಗ ಮಾಡುವುದರಿಂದ ಬರೆವಣಿಗೆಗೆ ಸಹಾಯವಾಗುವುದು.

## ಗುರುಪಾಠ ಮತ್ತು ಸಂಭಾಷಣೆ

ಕಾವ್ಯವ್ಯಾಸಂಗಕ್ಕೂ ಗುರು ಪಾಠ ಬೇಕು. ಹೀಗೆ ಉಪಾಧ್ಯಾಯರಿಂದ ಬೇಕಾದ ವಿಷಯವನ್ನು ತಿಳಿಯುವುದರ ಜೊತೆಗೆ ತಿಳಿದವರ ಜೊತೆಯಲ್ಲಿ ಯಾವುದಾದರೊಂದು ವಿಷಯವಾಗಿ ಸಂಭಾಷಿಸುವುದರ ಮೂಲಕವೂ ಸ್ನೇಹಿತರೊಡನೆ ವಿಚಾರಮಾಡುವುದರ ಮೂಲಕವೂ (ಕೆಲವಂ ಬಲ್ಲವರಿಂದ ಕಲ್ತು, ಎಂಬಂತೆ--ಸೋ. ಶತಕ) ಪ್ರಬಂಧಕ್ಕೆ ಬೇಕಾದ ವಿಷಯಗಳನ್ನು ಸಂಗ್ರಹಿಸಬಹುದು.

## ೩. ವಸ್ತು ಪರೀಕ್ಷೆ (ನಿರೀಕ್ಷಣೆ)

ನಮ್ಮ ಸುತ್ತಮುತ್ತಲಿರುವ ಪ್ರಕೃತಿಯ ಪರೀಕ್ಷೆಯನ್ನು ಮಾಡಿದ ನಂತರವೇ ಅವುಗಳ ವಿಚಾರವಾದ ಬರೆವಣಿಗೆಗೆ ಕೈಹಾಕಬೇಕು. ಅವುಗಳಲ್ಲಿ ಯಾವುದು ತಪ್ಪಾದರೂ ಲೇಖನದ ಅವಿಮರ್ಶೆಯು ಹೊರಬೀಳುವುದು. (ಉದಾ: ಸಮುದ್ರ, ತಿಮಿಂಗಲ ಇವುಗಳನ್ನು ನೋಡಿರದೆ ಅವುಗಳ ವಿಷಯ ಬರೆಯಲು ಹೋಗುವುದು ದಡ್ಡತನ. ಹಾಗೆಯೇ ನೋಡಿರುವ ಕುದುರೆಗೆ ಕೊಂಬಿದೆಯೆಂದು ಬರೆದರೆ ವಸ್ತು ಪರೀಕ್ಷೆ ಮಾಡಿಲ್ಲವೆಂದು ಗೊತ್ತಾಗುವುದು.) ನಾವು ಕಣ್ಣಾರ ಕಂಡುದ್ದನ್ನೂ ಕಿವಿಯಾರ ಕೇಳಿದ್ದನ್ನೂ ನಮ್ಮ ಸ್ವಂತ ಅನುಭವಕ್ಕೆ ತಂದುಕೊಂಡ ನಂತರವೇ ಬರೆವಣಿಗೆಯಲ್ಲಿಡಬೇಕು. ನಾವು ನೋಡುವ ಜನರು, ಕಂಡ ಪ್ರಕೃತಿ ದೃಶ್ಯಗಳ ಮತ್ತು ನಿತ್ಯ ಜೀವನಕ್ಕೆ ಸಂಬಂಧಪಟ್ಟ ಇತರ ಪದಾರ್ಥಗಳ ಅಥವಾ ಸಂಗತಿಗಳ ವಿಚಾರವಾಗಿ ಆಗಾಗ್ಗೆ ವರ್ಣಿಸಿ ಬರೆಯುವ ಅಭ್ಯಾಸ ಮಾಡುವುದರಿಂದ ಲೇಖಕನ ಶಕ್ತಿಯು ಬಲಪಡುವುದು.

## ೪. ಪ್ರತಿಭೆ (ಬುದ್ಧಿಶಕ್ತಿ)

ಒಬ್ಬೊಬ್ಬರ ಬುದ್ಧಿ ಶಕ್ತಿಯೂ ಒಂದೊಂದು ವಿಧವಾಗಿರುವುದು.

ಕೆಲವರಿಗೆ ಗ್ರಹಣಶಕ್ತಿ ತೀವ್ರ. ಮತ್ತೆ ಕೆಲವರಿಗೆ ನಿಧಾನ. ಇವರಲ್ಲಿ ಯಾರೇ ಆಗಲಿ ತಪ್ಪುಮಾಡುವುದು ಸಹಜ. ಆದುದರಿಂದ ಪ್ರಬಂಧವನ್ನು ಬರೆಯುವ ಮೊದಲೇ ಯೋಚನೆಮಾಡಿ ಬರೆಯಬೇಕಾದ ವಿಷಯಗಳನ್ನು ಸಿದ್ಧಪಡಿಸಿಕೊಳ್ಳುವುದರಿಂದ ಪ್ರಬಂಧವು ಉತ್ತಮವಾಗುವುದೆಂಬುದನ್ನು ಮರೆಯಬಾರದು. ವ್ಯಾಸಂಗಮಾರ್ಗದಲ್ಲಿ ವ್ಯಕ್ತಿಯ ಪ್ರತಿಭೆಯು ಮನನ ಚಿಂತನ ಮತ್ತು ಪ್ರತಿಪಾದನ ಶಕ್ತಿಗಳಿಂದ ಹೊರಬೀಳುವುದು. ಆದಕ್ಕಾಗಿ ಕೆಲವು ಸೂಚನೆಗಳನ್ನು ಮುಂದೆ ತಿಳಿಸಿವೆ.

## ಪ್ರಬಂಧ ಬರೆಯುವ ರೀತಿ.

### ೧. ಅರ್ಥವಿವರಣೆ.

ಯಾವ ಪ್ರಬಂಧವನ್ನು ಬರೆಯಬೇಕಾದರೂ ಅದರ ವಿಷಯವನ್ನು ನಾಲ್ಕಾರು ಸಲ ಓದಿ ಚೆನ್ನಾಗಿ ಅರ್ಥಮಾಡಿಕೊಂಡನಂತರವೇ ಅವುಗಳ ವಿವರಣೆಯನ್ನು ಪ್ರಾರಂಭಿಸಬೇಕು. (ಈ ವಿಚಾರದಲ್ಲಿ ವಿದ್ಯಾರ್ಥಿಗಳು ಬಹಳ ತಪ್ಪುಮಾಡುವುದು ಕಂಡುಬಂದಿದೆ. ಮೊದಲು ಅವರ ಮನಸ್ಸಿಗೆ ಸ್ಥೂಲವಾಗಿ ಯಾವುದು ಹೊಳೆದಿರುವುದೋ ಅದನ್ನೇ ಮುಂದುವರಿಸುತ್ತಾ ಹೋಗುವುದರಿಂದ ಅನೇಕ ವೇಳೆ ಅವರು ಹೇಳುವ ವಿಷಯವು ಕೊಟ್ಟ ವಿಷಯಕ್ಕಿಂತ ಬೇರೆಯಾಗಿ ಪ್ರಬಂಧವು ಕೆಟ್ಟು ಹೋಗುವುದು. ಬಹಳ ಬುದ್ಧಿವಂತರೂ ಇಂತಹ ತಪ್ಪುಮಾಡುತ್ತಿರುವರು.)

### ೨. ವಿಷಯಗಳ ಸಂಗ್ರಹ ಮತ್ತು ಸಿದ್ಧತೆ

ಕೊಟ್ಟ ವಿಷಯವನ್ನು ಅರ್ಥಮಾಡಿಕೊಂಡ ನಂತರ ಅದರ ವಿಚಾರವಾಗಿ ಯೋಚಿಸಿ ಬರೆಯುವುದು ಎರಡನೆಯ ಕರ್ತವ್ಯ. ಕೆಲವು ಕಥೆಗಳ ಬರವಣಿಗೆಗಳನ್ನು ಬಿಟ್ಟರೆ ಇತರ ಪ್ರಬಂಧಗಳಿಗೆ ಹಿಂದೆಯೇ ತಿಳಿಸಿರುವಂತೆ ಆ ವಿಷಯಕವಾದ ಗ್ರಂಥ ವ್ಯಾಸಂಗವು ಆವಶ್ಯಕ. ಇವರ ಜೊತೆಗೆ ಶಾಲೆಗಳಲ್ಲಿ ವಿದ್ಯಾರ್ಥಿಗಳು ನಡೆಸುವ ಚರ್ಚಾಗೋಷ್ಠಿಗಳು, ಉಪಾಧ್ಯಾಯರ ಮತ್ತು

ಹಿರಿಯರ ಸಲಹೆಗಳೂ ವಿಷಯ ಸಂಗ್ರಹಕ್ಕೆ ನೆರವಾಗುವುವು. ಮನಸ್ಸಿಗೆ ಹೊಳೆಯುವ ಅಭಿಪ್ರಾಯಗಳನ್ನು ಒಂದು ಕ್ರಮವಿಲ್ಲದೆ ವಿವರಿಸುತ್ತಾಹೋದರೆ ಮುಂದೆ ಹೇಳಬೇಕಾದ ಸಂಗತಿಗಳೇ ಮರೆತುಹೋಗುವುವು. ಅದಕ್ಕಾಗಿ ಮೊದಲು ಹೇಳಬೇಕಾದ ವಿಷಯಗಳನ್ನು ಖಚಿತವಾಗಿ ನಿರ್ಣಯಿಸಿಕೊಳ್ಳ ಬೇಕು.

## ೩. ವಿಷಯ ಸೂಚನೆ. (ವರ್ಗೀಕರಣ)

ವಿಷಯದ ಕಡೆ ಗಮನ ಕೊಟ್ಟಂತೆಲ್ಲಾ ಹೊಸವಿಚಾರಗಳೂ, ನಿಜಾಂಶಗಳೂ ಮತ್ತು ನಿದರ್ಶನಗಳೂ ಮನಸ್ಸಿಗೆ ತಾವಾಗಿಯೇ ಹೊಳೆಯುವುವು. ಅಂತಹ ಸಂಗತಿಗಳು ಮರೆತುಹೋಗಬಹುದಾದುದರಿಂದ ಜ್ಞಾಪಕಕ್ಕೆ ಬಂದೊಡನೆಯೇ ಅವುಗಳನ್ನು ಕಾಗದದ ಒಂದೆಡೆ ಗುರುತುಹಾಕಿಕೊಂಡಿದ್ದು ಅನಂತರ ಅವುಗಳಲ್ಲಿ ಒಂದು ಕ್ರಮವಿರುವಂತೆ ಯೋಚಿಸಿ ಅಂಕಿಗಳನ್ನು ಹಾಕ ಬೇಕು. ಈ ಕ್ರಮದಂತೆ ಬೇಡಪಾದುದನ್ನು ಬಿಟ್ಟು ಒಂದು ಸಾರಾಂಶ ಪಟ್ಟಿ (ರೂಪರೇಖೆ) ಯನ್ನು ತಯಾರಿಸಬೇಕು.

## ೪. ಪ್ರತಿಪಾದನೆ.

ಮೇಲ್ಕಂಡಂತೆ ತಯಾರಿಸಿದ ಸಾರಾಂಶ ಪಟ್ಟಿಯು ಪ್ರಬಂಧದ ಪೀಠಿಕೆ, ಶರೀರ, ಮತ್ತು ನಿಯಮಗಳಿಗೆ ಅನುಸಾರವಾಗಿರಬೇಕಲ್ಲದೆ ಸ್ವಾಭಾವಿಕವಾಗಿಯೂ, ಪರಸ್ಪರ ಸಂಬಂಧವುಳ್ಳದ್ದಾಗಿಯೂ ಮನವೊಪ್ಪುವಂತೆಯೂ, ಇರಬೇಕು. ಈ ವಿಧ ಸಾರಾಂಶ ಪಟ್ಟಿಯೇ ಮುಂದೆ ಬರೆಯುವ ಮಾರ್ಗ ದರ್ಶಕವಾಗುವುದು. ಲೇಖನದ ಪ್ರತಿಪಾದನಾ ಶಕ್ತಿಯಿಂದಲೂ ವಿಷಯ ಸೂಚನೆಯ ಸಹಾಯದಿಂದಲೂ ಪ್ರಬಂಧವು ಸುಂದರ ರೂಪುಗೊಳ್ಳುವುದು.

**ನಿದರ್ಶನ.** [ಸಾರಾಂಶ ಪಟ್ಟಿ ಅಥವಾ ರೂಪುರೇಖೆ]

**ವಿಷಯ: ಆನೆ**

೧) **ವರ್ಣನೆ :—** ಆಕಾರ—ಎತ್ತರ—ಶರೀರದ ಭಾಗಗಳು—ನಡಿಗೆ—ಬುದ್ಧಿ ಸೂಕ್ಷ್ಮತೆ.

೨) **ವಾಸಸ್ಥಳ :—** ಆಫ್ರಿಕಾ, ಇಂಡಿಯಾ ಮೊದಲಾದ ದೇಶಗಳು.

೩) **ಪ್ರಯೋಜನ:—** ಜೀವಿಸಿದ್ದಾಗ : ಭಾರಹೊರುವುದು, ಅಂಬಾರಿ, ಬೇಟೆ, ಇತರ ವಾಹನಗಳು.
ಸತ್ತ ಮೇಲೆ : ದಂತ, ಚರ್ಮದಿಂದಾಗುವ ಇತರ ವಸ್ತುಗಳು.

೪) **ಇತರ ವಿಷಯುಗಳು:—**೧. ಬೇಟೆಯಾಡುವ ಕ್ರಮ (ಹಿಂದಿನ, ಈಗಿನ ಪದ್ಧತಿಗಳು.)
೨. ಬುದ್ಧಿ ಸೂಕ್ಷ್ಮತೆಯ ನಿದರ್ಶನಗಳು (ಚಿಪ್ಪಿಗನ ಕಥೆಯಂತಹವು )

೫) **ಸಮಾಪ್ತಿ ವಾಕ್ಯಗಳು:—**ಆನೆಯ ಉಪಕಾರಸ್ಮರಣೆ.

[**ಸೂಚನೆ:—**ಇಲ್ಲಿ ಸರಿಯಾದ ರೀತಿಯಲ್ಲಿ ಸಾರಾಂಶ ಪಟ್ಟಿಯನ್ನು ಕೊಡಲಾಗಿದೆ. ವಿದ್ಯಾರ್ಥಿಗಳು ಸ್ವಂತ ಬುದ್ಧಿಯಿಂದಲೇ ಈ ರೀತಿ ಬರೆಯುವುದೂ ಕಷ್ಟವಾಗಿದೆ. ಅದಕ್ಕಾಗಿ ಹಿಂದೆ ಹೇಳಿದಂತೆ ಮೊದಲು ಅವರ ಮನಸ್ಸಿಗೆ ಹೊಳೆದುದ್ದನ್ನು (೧, ೪, ೫, ೩, ೨ ಹಾಕಿದ್ದರೆ) ಗುರ್ತಿಸಿಕೊಂಡು, ಅನಂತರ ಮೇಲೆ ತೋರಿಸಿರುವಂತೆ (೧ ರಿಂದ ೫ ರವರೆಗೆ) ಆದಿಯಿಂದ ಅಂತ್ಯದವರೆಗೆ ಕ್ರಮವಿರುವಂತೆ ಸಿದ್ಧಪಡಿಸಿಕೊಳ್ಳಬೇಕು.]

## ಪ್ರಬಂಧದ ಒಳಭಾಗ

ಸಾಮಾನ್ಯವಾಗಿ ಪ್ರಬಂಧದ ಒಳಭಾಗವನ್ನು **ಪೀಠಿಕೆ, ಪ್ರಬಂಧದ ಶರೀರ, ಮುಕ್ತಾಯ**ವೆಂದು ಮೂರು ವಿಧವಾಗಿ (ಪ್ರಾಣಿಗಳ ಅವಯವದಂತೆ : ಮುಖ—ದೇಹ—ಬಾಲ ಎಂಬಂತೆ) ವಿಂಗಡಿಸಬಹುದು.

### ೧. ಪೀಠಿಕೆ. (ಉಪಕ್ರಮ)

ಪೀಠಿಕೆಯು ಪ್ರಬಂಧದ ಒಟ್ಟು ಪ್ರಮಾಣಕ್ಕೆ ಅನುಗುಣವಾಗಿರಬೇಕು. ಇದು ಕೊಟ್ಟಿರುವ ವಿಷಯದ ವಿವರಣಾ ರೂಪವಾಗಿಯಾಗಲೀ

ಉಲ್ಲೇಖನ, ಗಾದೆ, ದೃಷ್ಟಾಂತ ಅಥವಾ ಆ ವಿಷಯ ಟೀಕೆಯ ರೂಪದಲ್ಲಾಗಲೀ ಪ್ರಾರಂಭವಾಗಬಹುದು. (**ಸೂಚನೆ:—** ಪ್ರಾರಂಭದಲ್ಲೇ ಕೆಲವು ವಿದ್ಯಾರ್ಥಿಗಳು ಬರೆಯುವಂತೆ—ಏನೆಂದರೆ, ಹೇಗೆಂದರೆ ಎಂದರೆ, ಎಂದು, ಹಾಗೆ, ಹೀಗೆ, ಹೆಸರು, ಎಂದರ್ಥ ಎಂಬೀ ಮೊದಲಾಗಿ ಬರೆಯುವುದು ತಪ್ಪು. ಹಾಗೆಯೇ ಕೆಲವು ವಿದ್ಯಾರ್ಥಿಗಳು ಪೀಠಿಕೆಯಲ್ಲೇ ಪರಿಸಮಾಪ್ತಿ ಹೊಂದುವಂತೆ ಮಾಡದೆ ಮಿತಿಯರಿತು ಬರೆಯಬೇಕು. ಪೀಠಿಕೆಯು ಪ್ರಬಂಧದ ಅಸ್ತಿಭಾರವಾಗಿರಬೇಕು.)

ಪೀಠಿಕೆ ಅಥವಾ ಉಪಕ್ರಮವನ್ನು, ನಾಣ್ನುಡಿಯಿಂದಲೂ, ಸಾಮಾನ್ಯ ಸಿದ್ಧಾಂತಗಳಿಂದಲೂ, ಕೆಲವು ಪ್ರಶ್ನೆಗಳನ್ನು ಕೇಳುವುದರ ಮೂಲಕವೂ ಚಿಕ್ಕ ಕಥೆ ಅಥವಾ ಪ್ರಸಂಗಗಳಿಂದಲೂ ಪ್ರಾರಂಭಿಸಬಹುದು. ಉಪಕ್ರಮವು ಒಟ್ಟು ಪ್ರಬಂಧ—ಪ್ರಮಾಣದ ದೃಷ್ಟಿಯಿಂದ ಚಿಕ್ಕ ವಾಕ್ಯ ಬೃಂದದಷ್ಟಿರುವುದು ಮೇಲು.

## ೨. ಪ್ರಬಂಧದ ಶರೀರ (ಪ್ರಧಾನ ಭಾಗ)

ಪ್ರಬಂಧದಲ್ಲಿ ವಿವರಿಸಿ ಹೇಳುವ ಮುಖ್ಯಾಂಶವು ಶರೀರ ಭಾಗದಲ್ಲಡಗಿರಬೇಕು. ಇದರ ಪ್ರತಿಯೊಂದು ಭಾಗಕ್ಕೂ ಸರಿಯಾಗಿ ವಿಷಯಕ್ಕೆ ತಕ್ಕ ಗಮನಕೊಟ್ಟಿರಬೇಕು. ಸಾರಾಂಶ ಪಟ್ಟಿಯ ಕ್ರಮದಲ್ಲಿ ಪರಸ್ಪರ ಸಂಬಂಧವಿರುವ ವಾಕ್ಯಬೃಂದವನ್ನು ರಚಿಸುವುದರಿಂದಲೂ ಕೆಲವು ಉಲ್ಲೇಖನಗಳನ್ನೂ, ಸುಶಬ್ದಗಳನ್ನೂ ಆರಿಸಿ ಉಪಯೋಗಿಸಿಕೊಳ್ಳುವುದರಿಂದಲೂ, ಶರೀರಭಾಗವು ಉತ್ತಮವಾಗುವುದು. ವಾಕ್ಯಗಳು ಸ್ಪಷ್ಟಾರ್ಥಗಳನ್ನು ಕೊಡುವುದಾಗಿಯೂ, ಚಿತ್ತಾಕರ್ಷಕವಾಗಿಯೂ ಇರಬೇಕಲ್ಲದೆ; ಅನಾವಶ್ಯಕ ಪದಗಳಿಂದಲೂ, ಅಸಂಬದ್ಧ ವಿಚಾರಗಳಿಂದಲೂ, ಪುನರುಕ್ತಿ ಮತ್ತು ಅಶ್ಲೀಲ ವಚನಗಳಿಂದಲೂ ಕೂಡಿರಬಾರದು. ಅರ್ಥ ಬರುವಂತೆ ಪದಗಳಿರಬೇಕೇ ಹೊರತು ಶಬ್ದಾಡಂಬರವಿರಬಾರದು. ಕೊಟ್ಟ ವಿಷಯಕ್ಕೆ ಸರಿಹೋಗುವ ಶೈಲಿ ಇದ್ದರೆ ಪ್ರಬಂಧಕ್ಕೆ ಕಳೆಬರುವುದು. ಮಹತ್ವ ಸಂಗತಿಗಳನ್ನು ಬರೆಯುವಾಗ ಅಲ್ಪ ವಿಚಾರಗಳನ್ನು ತರುವುದು ತಪ್ಪು. ಹಾಸ್ಯ ವಿಚಾರಗಳಲ್ಲಿ

ಮಿತಿಯಿರಬೇಕು. ಯಾವುದನ್ನೂ ಅತಿಮಾಡಬಾರದು. ಚಿಕ್ಕ ವಿಚಾರಗಳನ್ನೆತ್ತಿ ಬರೆಯುವಾಗ ಭಾರೀ ಯೋಚನೆಮಾಡುತ್ತಾ ಕುಳಿತುಕೊಳ್ಳಬಾರದು.

ಮೇಲ್ಕಂಡ ನಿಯಮಗಳನ್ನನುಸರಿಸಿ ಎಷ್ಟು ಬೇಕೋ ಅಷ್ಟು ವಿಚಾರಗಳನ್ನು ಸರಿಯಾದ ವಿಚಾರಗಳಿಂದ ಪ್ರತಿಪಾದಿಸಿದರೆ ಪ್ರಬಂಧದ ಶರೀರವು ಉತ್ತಮವಾಗುವುದು.

## ೩. ಮುಕ್ತಾಯ

(ಏಕಾರ್ಥಪದಗಳು :— ಮುಕ್ತಾಯ–ಉಪಸಂಹಾರ–ಸಮಾಪ್ತಿ–ನಿಗಮನ–ಕೊನೆಯ ಮಾತು ಇವು ಒಂದೇ ಅರ್ಥವುಳ್ಳವು.)

ಪ್ರಬಂಧದ ಪ್ರಾರಂಭಾಂತ್ಯಗಳು ಸರಿಯಾಗಿರುವುದರಿಂದ ಅದಕ್ಕೆ ಒಂದು ರೂಪಬರುವುದು.

ಪ್ರಬಂಧದ ಪ್ರಾರಂಭವು ಎಷ್ಟು ಆಕರ್ಷಕವಾಗಿರಬೇಕೋ ಮುಕ್ತಾಯವೂ ಅಷ್ಟೇ ಫಲದಾಯಕವಾಗಿಯೂ ತೃಪ್ತಿಕರವಾಗಿಯೂ ಇರಬೇಕು. ಪೀಠಿಕೆಯ ಸ್ವಾರಸ್ಯವನ್ನು ನಿಗಮನವು ಪುಷ್ಟೀಕರಿಸಬೇಕು. ಅಸಂಪೂರ್ಣವಾಗಿ ಪ್ರಬಂಧವನ್ನು ನಿಲ್ಲಿಸುವುದರಿಂದ ಲೇಖನವು ಒಟ್ಟಿನಲ್ಲಿ ಕೆಟ್ಟು ಹೋಗುವುದು.

[**ಸೂಚನೆ:—** ವಿದ್ಯಾರ್ಥಿಗಳು ಪ್ರಬಂಧದ ಮುಕ್ತಾಯದಲ್ಲಿ ಅಸಡ್ಡೆ ಮಾಡುವುದರಿಂದಲೇ ಲೇಖನವು ಅಪೂರ್ಣವಾಗಿ ನಿಲ್ಲುವುದಲ್ಲದೆ ಅವರಿಗೆ ಬರೆವಣಿಗೆಯ ರೀತಿ ತಿಳಿಯದೆಂಬ ಭಾವನೆಯು ಓದುವವರ ಮನಸ್ಸಿನಲ್ಲಿ ನಿಲ್ಲುವುದೆಂಬುದನ್ನು ಗಮನಿಸಬೇಕು.]

ಒಟ್ಟಿನಲ್ಲಿ ಪ್ರಬಂಧವು ಸರಿಯಾಗಿರಲು ಉಪಸಂಹಾರವು ನೆಟ್ಟಗಿರಬೇಕು. ಅದಕ್ಕಾಗಿ ಕೆಳಗೆಕಂಡ ವಿಚಾರಗಳನ್ನು ಮರೆಯದಿರಬೇಕು.

೧) ಕ್ರೋಢೀಕರಣ ಮಾಡುವುದು.

೨) ಲೇಖನ ವಿಷಯವಲ್ಲಿ ಗೊತ್ತಾಗುವ ಕೊನೆಯಮಾತು ಬರೆಯುವುದು
೩) ಸಾಧಿಸಬೇಕಾದ ವಿಷಯವನ್ನು ಜ್ಞಾಪಕಕ್ಕೆ ತರುವುದು.

## ಸೂತ್ರ ಸಂಗ್ರಹ

ಪ್ರಬಂಧವನ್ನು ಮುಂದುವರಿಸುವ ಮಾರ್ಗದಲ್ಲಿ ಈ ಕೆಳಗೆ ಕಂಡ ಸೂತ್ರ ಸಂಗ್ರಹವನ್ನು ಗಮನಿಸುವುದು ಮೇಲು.

೧. ಕೊಟ್ಟ ವಿಷಯವನ್ನು ಕುರಿತು ಮನಸ್ಸಿನಲ್ಲೇ ವಿವರಿಸಿಕೊಳ್ಳಿ.

೨. ಮನಸ್ಸಿಗೆ ವಿಷಯವು ಹೊಳೆಯುವತನಕ ಯೋಚಿಸಿ, ಅನಂತರ ಗೊತ್ತಾದಂತೆಲ್ಲಾ ಕಾಗದದ ಒಂದು ಕಡೆ ಸಂಖ್ಯಾಕ್ರಮದಲ್ಲಿ ಬರೆದಿಡಿ,

೩. ಕೆಲವು ಮುಖ್ಯಭಾಗಗಳಾಗಿ ಮಾಡಿಕೊಂಡು ಅವುಗಳಲ್ಲಿ ಬೇಕಾದುದನ್ನು ಆರಿಸಿಕೊಂಡು ಬೇಡವಾದುದ್ದನ್ನು ತಳ್ಳಿಹಾಕಿ.

೪. ಮೇಲ್ಕಂಡ ಕ್ರಮದಲ್ಲಿ ಪೂರ್ಣವಾದ ರೂಪುರೇಖೆಯನ್ನು ತಯಾರಿಸಿ ಇದನ್ನು ಲಕ್ಷ್ಯದಲ್ಲಿಟ್ಟು ಹಲವು ವಾಕ್ಯಬೃಂದಗಳಲ್ಲಿ ಪ್ರಬಂಧವನ್ನು ಬರೆಯಿರಿ.

೫. ಪ್ರಬಂಧದಲ್ಲಿ ಪೀಠಿಕೆ, ಶರೀರಭಾಗ ಮತ್ತು ನಿಗಮನಗಳಿರಲಿ.

೬. ಪೂರ್ಣಾಭಿಪ್ರಾಯ ಬರುವಂತೆ ಸಂಕ್ಷೇಪಿಸಿದ, ಸ್ಪಷ್ಟವಾದ ಮತ್ತು ಸ್ವಾಭಾವಿಕವಾದ ಕ್ರಮದಲ್ಲಿ ನಿಮ್ಮ ಬರೆವಣಿಗೆಯಿರಬೇಕು.

೭. ದೀರ್ಘವಾದ ವಾಕ್ಯಗಳನ್ನು ಬರೆಯದೆ ಹೆಚ್ಚು ಅಲಂಕಾರಕ್ಕೆ ಹೋಗದೆ ಹೇಳಿದ್ದನ್ನೇ ಹೇಳದೆ ಮತ್ತೊಬ್ಬರ ಶೈಲಿಯನ್ನನುಸರಿಸದೆ ಸ್ವಂತ ವ್ಯಕ್ತಿತ್ವವನ್ನು ಪಡೆದ ಶೈಲಿಯಲ್ಲಿ ನಿಮ್ಮ ಬರೆವಣಿಗೆ ಇರಬೇಕು.

೮. ಪ್ರಬಂಧವು ಸಂಕ್ಷೇಪವಾಗಿಯೂ ಸುಲಭ ಶೈಲಿಯಲ್ಲೂ ಮತ್ತು ಸ್ವಾಭಾವಿಕವಾಗಿಯೂ ಇರಬೇಕು.

೯. ವಾಕ್ಯಬೃಂದಗಳೂ ಲೇಖನಚಿಹ್ನೆಗಳೂ ಬೇಕಾದೆಡೆ ಸಾಕಷ್ಟು ಸ್ಥಳ ಬಿಟ್ಟು ಬರೆಯುವುದೂ, ಸುಂದರ ಲಿಪಿಯೂ ನಿಬಂಧಕ್ಕೆ ಅತ್ಯಗತ್ಯ.

೧೦. ಪ್ರಬಂಧವನ್ನು ಬರೆದನಂತರ ಮೊದಲಿನಿಂದ ಕೊನೆಯತನಕ ಓದಿ ಅಲ್ಲಲ್ಲಿ ಬರುವ ತಪ್ಪುಗಳನ್ನು ತಿದ್ದಿ ಸರಿಪಡಿಸಬೇಕು.

ಮೇಲ್ಕಂಡ ಕ್ರಮವನ್ನು ಮರೆಯದ ವಿದ್ಯಾರ್ಥಿಗಳು ಯಾವ ಪ್ರಬಂಧವನ್ನು ಬರೆದರೂ ಅದು ಬಹಳ ಚೆನ್ನಾಗಿರುವುದರಲ್ಲಿ ಸಂಶಯವಿಲ್ಲ ಮುಂದೆ ಕೆಲವು ಪ್ರಬಂಧಗಳ ರೂಪರೇಖೆಗಳನ್ನೂ ಕೆಲವು ಪೂರ್ಣ ಪ್ರಬಂಧಗಳನ್ನೂ ಕೊಡಲಾಗಿದೆ. ಮೊದಲು ತಾವು ಸ್ವಂತ ಪಟ್ಟಿಯನ್ನು ತಯಾರಿಸಿಕೊಂಡನಂತರ ಇದರ ಸಹಾಯವನ್ನು ಪಡೆದು ಸರಿ ತಪ್ಪುಗಳನ್ನು ತಿದ್ದಿಕೊಳ್ಳಬಹುದು. ಯಾರೇ ಆಗಲಿ ಅವರವರ ಯೋಗ್ಯತೆಗೆ ತಕ್ಕಂತೆ ಪ್ರಬಂಧವನ್ನು ಬರೆಯುವರು. ಆದಕಾರಣ ವಿದ್ಯಾರ್ಥಿಗಳ ತರಗತಿಯ ಮಟ್ಟಕ್ಕೂ ಓದಿಗೂ ತಾತ್ಕಾಲಿಕ ಸ್ಫೂರ್ತಿಗೂ ಪ್ರಬಂಧವು ಅನುಗುಣವಾಗಿರುತ್ತದೆ. (ಒಂದೇ ವಿಷಯವನ್ನು ಹಲವು ದರ್ಜೆಯ ತರಗತಿಗೆ ಕೊಟ್ಟಾಗ ಬರೆವಣಿಗೆ ವ್ಯತ್ಯಾಸವಾಗುವುದನ್ನು ಕಾಣಬಹುದು.) ಇಲ್ಲಿ ಕೊಟ್ಟಿರುವ ವಿಷಯವು ಮಾರ್ಗ ತೋರಿಸುವುದಕ್ಕೇ ಹೊರತು ಅಷ್ಟನ್ನು ಮಾತ್ರ ಬರೆಯಬೇಕೆಂದಾಗಲೀ, ಇದರಂತಾಗಲೀ, ಇದೇ ಶೈಲಿಯಲ್ಲಾಗಲೀ ಬರೆಯ ಬೇಕೆಂದಲ್ಲ. ಆದುದರಿಂದ ಪ್ರಬಂಧವನ್ನು ಬರೆಯುವಾಗ ಸ್ವಂತ ಭಾವನೆಗೂ, ಸಂಗತಿಗಳಿಗೂ, ಉತ್ತಮಶೈಲಿಗೂ ಹೆಚ್ಚು ಗಮನಕೊಡಬೇಕು.

ಸಾಧಾರಣವಾಗಿ ಮಾಧ್ಯಮಿಕ ಶಾಲೆಗಳಲ್ಲಿ ಕಾಗದದ ಬರೆವಣಿಗೆಯ ಜೊತೆಗೆ ವರ್ಣನಪರ ಮತ್ತು ಕಥನಪರ ಪ್ರಬಂಧಗಳನ್ನೂ ಪ್ರೌಢಶಾಲೆಯಲ್ಲಿ ಇವುಗಳೆಲ್ಲದರ ಜೊತೆಗೆ ಇತರ ವಿಧವಾದ ಪ್ರಬಂಧಗಳನ್ನೂ ಕೇಳುವುದು ರೂಢಿ ಯಾಗಿದೆಯಾಗಿ ವಿಧ್ಯಾರ್ಥಿಗಳು ಹೆಚ್ಚು ಆಸಕ್ತಿ ವಹಿಸಿ ಆಯಾಯ ದರ್ಜೆಗೆ ಕಡಿಮೆಯಾಗದ ರೀತಿಯಲ್ಲಿ ಸ್ವಂತವಾಗಿ ಬರೆಯುವ ಅಭ್ಯಾಸ ಮಾಡಬೇಕು.

———

# ಕಥೆಗಳು

ಕಥಾರಚನೆಯು ಒಂದು ಹಿರಿಯ ಕಲೆ. ಯಾವುದೊಂದು ಕಥೆಯನ್ನು ತಿಳಿಸಬೇಕಾದರೂ ಅನುಭವವಿರಬೇಕು. ಅವಿದ್ಯಾವಂತರಿಗಿಂತ ಅಕ್ಷರಸ್ಥರಿಗೆ ಅನುಭವವು ಸುಲಭ ಸಾಧ್ಯವು. ಮತ್ತೊಬ್ಬರು ಬರೆದ ಕಥೆಯನ್ನು ವಿದ್ಯಾರ್ಥಿಗಳು ತಮ್ಮ ಸ್ವಂತ ಮಾತಿನಲ್ಲಿ ಹೇಳಬೇಕಾದಾಗಲೂ ಕೆಲವು ನಿಯಮಗಳನ್ನು ಪಾಲಿಸದಿದ್ದರೆ ಕಥಾರಚನೆಯು ಸ್ವಾರಸ್ಯವಾಗುವುದಿಲ್ಲ. (ವಿದ್ಯಾರ್ಥಿಗಳು ಪಠ್ಯಪುಸ್ತಕಗಳ ಕಥೆಗಳನ್ನು ಸಂಗ್ರಹಿಸಿ ಬರೆಯಬೇಕಾದ ಸಂದರ್ಭಗಳಲ್ಲಿ ಪುಸ್ತಕದರೀತಿಯಲ್ಲಾಗಲಿ; ಅಲ್ಲೊಂದು ಇಲ್ಲೊಂದು ಮಾತುಗಳನ್ನು ಸೇರಿಸಿಯಾಗಲಿ; ಒಂದು ಕ್ರಮಕಟ್ಟುಪಾಡುಗಳಿಲ್ಲದೆ ಅಸಂಬದ್ಧವಾಗಿ ಪುಟಗಟ್ಟಲೆ ಗೀಚಿಬಿಡುವರು. ಹೀಗೆ ಮಾಡದೆ ಹಿಂದಿನ ಸೂಚನೆ ಅನುಸರಿಸುವುದರಿಂದ ಅವರ ಬರೆವಣಿಗೆಯು ಉತ್ತಮವಾಗುವುದು.)

ಕಥೆಯನ್ನು ಬರೆಯುವ ಮೊದಲು ಕಥಾವಸ್ತುವನ್ನು (ಕಥೆಯ ಮುಖ್ಯ ಸಂಗತಿಗಳನ್ನು) ಅವು ನಡೆದ ಕ್ರಮದಲ್ಲಿ ಕಾಗದದ ಒಂದು ಭಾಗದಲ್ಲಿ ಬರೆದಿಟ್ಟುಕೊಳ್ಳಬೇಕು. ಒಟ್ಟು ಕಥೆಯ ರೂಪುರೇಖೆಯ ಸಹಾಯದಿಂದ ಅಸ್ಥಿಪಂಜರಕ್ಕೆ ಜೀವಕಳೆ ತುಂಬುವಂತೆ ವಿವಿಧ ವಾಕ್ಯವೃಂದಗಳಲ್ಲಿ ಕಥೆಯ ಯಾವ ಅಂಶವನ್ನೂ ಬಿಡದೆ ತಮ್ಮದೇ ಆದ ಉತ್ತಮ ಶೈಲಿಯಲ್ಲಿ ಕಥೆಯನ್ನು ಬರೆಯಬೇಕು. ಇವರ ಪ್ರಾರಂಭವನ್ನೂ ಕೊನೆಯನ್ನೂ ಎಚ್ಚರಿಕೆಯಿಂದ ಬರೆದಿರಬೇಕು. ಕೊಟ್ಟಕಾಲಕ್ಕೆ ಸರಿಯಾಗಿ ಮೂಲಕಥೆಯ ಪ್ರಮಾಣವನ್ನು ಕಿರಿದಾಗಿ ಮಾಡಿ ರೂಪುರೇಖೆಯಲ್ಲಿರುವಂತೆ ಸಣ್ಣ ಕಥೆಗಳನ್ನು ಮುಗಿಸುವುದು ಮೇಲು. ಕಥೆಯನ್ನು ಸಂಗ್ರಹಿಸುವಾಗ ಮೂಲದಲ್ಲಿರುವ ಅವತರಣಗಳನ್ನು ಬಿಟ್ಟು ಪರೋಕ್ಷ ಕಥನದಿಂದ ಕಥೆಯನ್ನು ನಿರೂಪಿಸಬೇಕು. ಕಲ್ಪನಾಕಥೆಯಲ್ಲಿ ಅಲ್ಪಸ್ವಲ್ಪ ವರ್ಣನೆಯನ್ನು ಸಂಭಾಷಣೆಯನ್ನೂ ಉಚಿತವರಿತು ಉಪಯೋಗಿಸಬೇಕು.

ಒಟ್ಟಿನಲ್ಲಿ ಕಥೆಯ ಬರೆಹದಲ್ಲಿ ಹಿಂದಿನ ಸೂಚನೆಗಳನ್ನು

ಗಮನದಲ್ಲಿಟ್ಟು ಈ ಕೆಳಗಿನ ಸಂದರ್ಭಗಳಲ್ಲಿ ಕಥಾಬರೆಹವನ್ನು ಕಲಿತಿರಬೇಕು:

೧. ಕಥಾಸಾರಾಂಶವನ್ನು ಕೊಟ್ಟಾಗ ರೂಪು ರೇಖೆಯಲ್ಲಿರುವಷ್ಟು ವಿಷಯಗಳನ್ನು ವಿವರಿಸಿ ಬರೆಯುವುದು.

೨. ಕೇವಲ ಊಹೆಯ ಪದಸಮುಚ್ಚಯಗಳಿಂದ ಪೂರ್ಣ ಕಥೆಯನ್ನು ಬರೆಯುವುದು.

೩. ಅಪೂರ್ಣವಾದ ಕಥೆಯನ್ನು ಪೂರ್ಣಗೊಳಿಸುವುದು.

೪. ಸ್ವತಂತ್ರವಾದ ಕಲ್ಪಿತ ಕಥೆಯನ್ನು ಬರೆಯುವುದು.

### ೧. **ಪುಟ್ಟ ಕಥೆಗಳು.** (ಸಂ. ರೂ. ರೇ.)

೧. ಇಬ್ಬರು ಭಿಕ್ಷುಕರು—ಕುರುಡ, ಕುಂಟರು—ಇಬ್ಬರೂ ನಿಸ್ಸಹಾಯರು—ಕುಂಟನ ಸಲಹೆ—ಕುರುಡನು ಕುಂಟನನ್ನು ಹೊರುವುದು—ಕುಂಟನು ದಾರಿ ತೋರಿಸುವುದು—ಪರಸ್ಪರ ಸಹಾಯ.

೨. ಕಾಡಿನ ಪ್ರಯಾಣಿಕರು — ಕರಡಿಯನ್ನು ಸಂಧಿಸುವುದು — ಒಬ್ಬನು ಮರ ಹತ್ತುವುದು—ಮತ್ತೊಬ್ಬನು ಸತ್ತಂತೆ ಮಲಗುವುದು—ಕರಡಿಯು ಮೂಸಿ ನೋಡಿ ಮುಂದಕ್ಕೆ ಹೋಗುವುದು—ಮೊದಲನೆಯವನ ಪ್ರಶ್ನೆ—ಅವನ ಉತ್ತರ—"ಅಪಾಯದಲ್ಲಿ ದೂರವಾಗುವ ಸ್ನೇಹಿತರನ್ನು ನಂಬದಿರು."

### ೨. **ಸಣ್ಣ ಕಥೆಗಳು.** (ವಿಸ್ತಾರ ರೂಪುರೇಷೆ)

### ೧. ಎಲ್ಲಾ ಯಾರಿಗೆ ಗೊತ್ತು.

ನಾರಾಯಣಮೂರ್ತಿಯ ವೃತ್ತಾಂತ — ಶ್ರವಣಬೆಳಗೊಳದ ಪ್ರಯಾಣ—ಅಂಬಿಗನೊಡನೆ ಮಾತುಕತೆ—ಅಪಾಯದಿಂದ ಪಾರಾದ ಬಗೆ—ಹೂವಾಡಿಗನೊಡನೆ ಚರ್ಚೆ—ಅವನು ಕಟ್ಟಿದ್ದ ಹೂವಿನ ಮೆಚ್ಚಿಗೆ—ನಾರಾಯಣಮೂರ್ತಿಯ ಪರಿವರ್ತನೆ—ಅಹಂಕಾರ ಖಂಡನೆ—ನಿಗಮನ—"ಎಲ್ಲಾ ಯಾರಿಗೆ ಗೊತ್ತು."

### ಕೌತ್ಸ

ವರತಂತುವಿನ ಬಳಿಗೆ ಕೌತ್ಸನು ಬಂದುದು—ಅವನ ಗುರುಕುಲ ವಾಸ—ಗುರುದಕ್ಷಿಣೆಯನ್ನು ತರಲು ಪ್ರಯತ್ನ—ರಘುಮಹಾರಾಜನ ಆಗಿನ ಸ್ಥಿತಿ—ರಾಜನ ಉತ್ತರ—ದ್ರವ್ಯ ಸಂಪಾದನೆಗೆ ರಾಜನು ಮಾಡಿದ ಪ್ರಯತ್ನ —ಕೋಶಾಧಿಕಾರಿಯ ಅರಿಕೆ—ಕೌತ್ಸನೂ, ಮಹಾರಾಜನೂ ಪ್ರಶಂಸೆಗೆ ಪಾತ್ರರಾದುದು............... (ಗುರುಕುಲ ಕಥಾವಳಿ)

### ೩. ಅಪೂರ್ಣ ಕಥೆಯನ್ನು ಪೂರ್ಣಗೊಳಿಸುವುದು.

೧. ರೈತನ ಮಗಳು ತಲೆಯ ಮೇಲೆ ಹಾಲಿನ ಪಾತ್ರೆಯನ್ನಿಟ್ಟು ಮಾರಾಟಕ್ಕೆ ಹೋಗುತ್ತಿರುವುದು—ಮಾರಾಟವಾದ ಮೇಲೆ ಪದಾರ್ಥ ತೆಗೆದುಕೊಳ್ಳುವ ಯೋಚನೆ—ಹಣಗಾರಳಾಗುವ ಕನಸು—ಮದುವೆಯ ತಿರಸ್ಕಾರ—ಅವಿಯಿಂದ ತಲೆಯಲ್ಲಾಡಿಸುವುದು. ಮುಂದೆ...............

೨. ಮೂವರು ಒಂದು ಹಣದ ಚೀಲವನ್ನು ಕಂಡದ್ದು—ಹಣದ ಹಂಚಿಕೆಯ ಪ್ರಯತ್ನ—ಎಲ್ಲರಿಗೂ ಹಸಿವಾಗುವುದು—ಒಬ್ಬನು ಆಹಾರ ವನ್ನೊದಗಿಸಲು ಹೋಗುವುದು—ಅದರಲ್ಲಿ ವಿಷ ಬೆರೆಸುವುದು—ಅವನಿಲ್ಲದಿ ದ್ದಾಗ ಉಳಿದಿಬ್ಬರು ಅವನ ಕೊಲೆಗೆ ಯತ್ನಿಸುವುದು.

### ಮಾದರಿ ೧—ಇಬ್ಬರು ಭಿಕ್ಷುಕರು (ಪೂರ್ಣ ಕಥೆ)

ಒಂದು ಊರಿನಲ್ಲಿ ಇಬ್ಬರು ಭಿಕ್ಷುಕರಿದ್ದರು. ಅವರಲ್ಲಿ ಒಬ್ಬ ಕುಂಟ, ಮತ್ತೊಬ್ಬ ಕುರುಡ, ಇವರಿಬ್ಬರೂ ಕೆಲವು ಕಾಲ ಒಂಟಿಯಾಗಿ ಭಿಕ್ಷಕ್ಕೆ ಅಲೆಯುತ್ತಾ ತಮ್ಮ ಅಂಗಹೀನತೆಯಿಂದ ಬಹು ತೊಂದರೆಗೊ ಳಗಾದರು.

ಹೀಗಿರಲು ಒಂದು ದಿನ ಕುಂಟನು ಕುರುಡನನ್ನು ಸಂಧಿಸಿ ತವಗಿ ಕಷ್ಟ ಪರಿಹಾರಕ್ಕೆ ಒಂದು ಸಲಹೆಯನ್ನು ಹೇಳಿದನು. ಕುರುಡನು ತನ್ನನ್ನು ಎತ್ತಿಕೊಳ್ಳುವಂತೆಯೂ, ತಾನು ಅವನಿಗೆ ದಾರಿ ತೋರಿಸುವಂತೆಯೂ

ಹೀಗೆ ಮಾಡುವುದರಿಂದ ಇಬ್ಬರೂ ಅಪಾಯಗಳಿಂದ ಪಾರಾಗಬಹುದೆಂಬುದೇ ಆ ಸಲಹೆಯಾಗಿತ್ತು. ಕುರುಡನು ಅವನ ಮಾತಿಗೆ ಒಪ್ಪಿದನು. ಮುಂದೆ ಭಿಕ್ಷಕ್ಕೆ ಹೋಗುವಾಗ ಆ ರೀತಿ ಇಬ್ಬರೂ ನಡೆದುಕೊಳ್ಳುತ್ತಿದ್ದುದರಿಂದ ಯಾವ ಅಪಾಯಕ್ಕೂ ಸಿಕ್ಕದೆ ಅವರಿಬ್ಬರೂ ನೆಮ್ಮದಿಯಾಗಿದ್ದರು. ಆದು ದರಿಂದ ಪರಸ್ಪರ ಸಹಾಯದಿಂದ ಲಾಭವುಂಟು.

---

# ಕಾಗದಗಳ ಬರೆವಣಿಗೆ

## ಪತ್ರ ಲೇಖನ ವಿಧಾನ

(ಪತ್ರ—ಓಲೆ—ಕಾಗದ ಇವು ಒಂದೇ ಅರ್ಥವುಳ್ಳವು.)

ಕಾಗದಗಳ ಬರೆವಣಿಗೆಯು ವ್ಯಕ್ತಿ ಮತ್ತು ವಿಷಯಗಳಿಗೆ ತಕ್ಕಂತೆ ಭಿನ್ನಭಿನ್ನಕ್ರಮದಲ್ಲಿರುತ್ತದೆ. ಕನ್ನಡದಲ್ಲಿ ಕ್ಷೇಮ ಸಮಾಚಾರಗಳನ್ನು ಬರೆಯು ವಾಗ, ಹಿಂದಿನ ರೀತಿಯ ಒಕ್ಕಣೆಗಳನ್ನೂ, ಹಳೆಯ ವಿಳಾಸ ಪದ್ಧತಿಗಳನ್ನೂ ಬಿಟ್ಟು ಆಂಗ್ಲ ಭಾಷಾ ಪದ್ಧತಿಯನ್ನು ಅನುಸರಿಸುವುದರಿಂದ ಬಹಳ ಸೌಕರ್ಯ ಉಂಟು. ಇವುಗಳಲ್ಲಿ ಕಾಗದಗಳು ವಿಳಾಸದಾರರಿಗೆ ಸರಿಯಾಗಿ ತಲಪುವುದೂ, ವಿಳಂಬವಾಗದಿರುವುದೂ, ಪತ್ರಗಳ ಸ್ಥಳಕ್ಕೆ ತಕ್ಕಷ್ಟು ಪೂರ್ಣ ಸಂಗತಿ ಗಳನ್ನು ಮತ್ತೊಬ್ಬರಿಗೆ ತಿಳಿಸುವುದೂ ಮುಖ್ಯವಾದುವು.

ಜಾತ್ರೆ, ಶಾಲೆಯ ಆಟಪಾಟಗಳು, ಊರಿನ ಸಂಗತಿಗಳೇ ಮೊದ ಲಾದುವನ್ನು ಮತ್ತೊಬ್ಬರಿಗೆ ತಿಳಿಸುವಾಗ, ಪತ್ರಲೇಖನದಲ್ಲಿ ಸ್ವಲ್ಪಮಟ್ಟಿಗೆ ಪ್ರಬಂಧರಚನೆಯ ಸೂತ್ರಗಳನ್ನು ಗಮನದಲ್ಲಿಟ್ಟಿರಬೇಕು. ವಿದ್ಯಾರ್ಥಿಗಳು ದೊಡ್ಡ ತರಗತಿಗೆ ಬಂದರೂ, ಶಾಲೆಯ ರಜಾ ಚೀಟಿಗಳನ್ನು ಬರೆಯುವಾ ಗಲೂ, ಪ್ರಬಂಧ ರಚನೆಗಿಂತ ಮಿಗಿಲಾದ ತಪ್ಪನ್ನು ಈ ಬರೆವಣಿಗೆಯಲ್ಲೂ ಮಾಡುತ್ತಿರುವುದು ಕಂಡುಬರುತ್ತಿದೆ. ಆದುದರಿಂದ ಪಾಠ ಕ್ರಮದಲ್ಲಿ

ಕಾಗದದ ಬರೆವಣಿಗೆಗೆ ಹೆಚ್ಚು ಹೆಚ್ಚು ಗಮನಕೊಡಬೇಕೆಂಬುದನ್ನು ಮತ್ತೆ ಮತ್ತೆ ಒತ್ತಿ ಹೇಳುವ ಅಗತ್ಯವಿಲ್ಲ. ಯಾರೇ ಆಗಲಿ ಮತ್ತೊಬ್ಬರಿಗೆ ತಮ್ಮ ಅಭಿಪ್ರಾಯವನ್ನು ತಿಳಿಸುವಾಗ, ಬರೆವಣಿಗೆಯೂ ಕೂಡ ಮಾತನಾಡುವ ರೀತಿಯಲ್ಲಿಯೇ ಗೌರವ ವಚನಗಳಿಂದ ಕೂಡಿದ್ದುದಾಗಿಯೂ, ಮನಸ್ಸಿಗೆ ಹರ್ಷವಾಗುವಂತೆಯೂ, ಇರಬೇಕೆಂಬುದನ್ನು ಮರೆಯಬಾರದು.

## ಬರೆವಣಿಗೆಯ ರೀತಿ.

ಪ್ರತಿಯೊಂದು ಕಾಗದದ ರೀತಿಯೂ ಬರೆಯುವ ವಿಷಯಕ್ಕೂ, ಕುರಿತ ಜನರಿಗೂ ತಕ್ಕಹಾಗಿರುವುದು. ಇಲ್ಲಿ ಎಲ್ಲಕ್ಕೂ ಅನ್ವಯಿಸುವ ಕೆಲವು ಸಾಮಾನ್ಯ ನಿಯಮಗಳನ್ನು ಮಾತ್ರ ಕೊಡಲಾಗಿದೆ. ೧) **ಅಗ್ರ ಲೇಖನ ೨) ಮರ್ಯಾದಾ ವಚನಗಳು ೩) ಕಾಗದದ ಸಂಗತಿ** ೪) **ಸಮಾಪ್ತಿ ೫) ರುಜು** ೬) ವಿಳಾಸ.

೧) **ಅಗ್ರಲೇಖನ:—** ಇದರಲ್ಲಿ ಕಾಗದ ಬರೆಯುವ ವಿಳಾಸವೂ ಮತ್ತು ತಾರೀಖೂ ಕಾಗದದ ಮೇಲ್ಗಡೆಯ ಪಾರ್ಶ್ವದಲ್ಲಿರಬೇಕು. ಹಾಗಿಲ್ಲದಿದ್ದರೆ ಓದುವವರಿಗೆ ಯಾರಿಂದ ಮತ್ತು ಯಾವಾಗ ಬರೆಯಲ್ಪಟ್ಟಿತೆಂಬುದು ಅನೇಕ ವೇಳೆ ತಿಳಿಯುವುದೇ ಇಲ್ಲ. ಕಾಗದದ ಎಡ ಪಾರ್ಶ್ವದಲ್ಲಿ ಕುಶಲ ಅಥವಾ ಕ್ಷೇಮವೆಂದು ಬಂಧು ಮಿತ್ರರಿಗೆ ಬರೆಯುವ ಕಾಗದದಲ್ಲಿರಬೇಕು. (ಅಪವಾದ ತಿಳಿದಿರಬೇಕು.)

೨) **ಮರ್ಯಾದಾ ವಚನಗಳು:—** ಯಾರನ್ನು ಕುರಿತು ಬರೆಯುವೆವೋ ಅವರಿಗೂ ಕಾಗದ ಬರೆಯುವವರಿಗೂ ಇರುವ ಸಂಬಂಧದ ಪ್ರಕಾರಕ್ಕೆ ಮರ್ಯಾದೆಯ ಮಾತುಗಳು ವ್ಯತ್ಯಾಸವಾಗುವುವು. [ಕನ್ನಡ ಭಾಷೆಯ ಮರ್ಯಾದೆಯನ್ನು ಅನುಸರಿಸಿ ಎಲ್ಲಾವಿಷಯಗಳಲ್ಲಿ ಹೇಗೆ ಪ್ರಾರಂಭಿಸಬೇಕೆಂಬುದನ್ನು ಮುಂದೆ ಕೊಟ್ಟಿರುವ ಪಟ್ಟಿಯಲ್ಲಿ ನೋಡಿ ತಿಳಿಯಬಹುದು.] ಕಾಗದದ ಆದಿಯಲ್ಲಿ (ಮ॥ ರಾ॥.....................ಸ॥ ದಲ್ಲಿ .....................ಮಾಡುವ ನಮಸ್ಕಾರಗಳು.......ಎಂದು ಬರೆದ ನಂತರ)

ಎಂದರೆ ವಿಷಯಾರಂಭಕ್ಕೆ ಹಿಂದೆ " ಉಭಯ ಕುಶಲೋಪರಿ ಸಾಂಪ್ರತ (ಉ|| ಕು|| ಸಾಂ||) ಎಂಬ ಮಾತುಗಳನ್ನು ಬರೆಯುವುದು ರೂಢಿಯಾಗಿದೆ.

೩) **ವೃತ್ತಾಂತ ಭಾಗ:**—ಬೇರೆ ಬೇರೆ ಜನಗಳಿಗೆ ಬೇರೆ ಬೇರೆ ಸಂಗತಿಯ ಕಾಗದಗಳನ್ನು ಬರೆವಾಗಲೂ ಬರೆವಣಿಗೆಯ ವಿಚಾರದಲ್ಲಿ ಕೆಲವು ನಿಯಮಗಳನ್ನು ಪಾಲಿಸಬೇಕು.

(ಅ) ಕಾಗದದ ಬರೆವಣಿಗೆಯು ಉಚಿತ ವಾಕ್ಯಬಂಧಗಳಾಗಿರಲಿ.

(ಆ) ಸುಲಭವಾದ ಮತ್ತು ನೇರವಾದ ಭಾಷೆಯನ್ನುಪಯೋಗಿಸಿ.

(ಇ) ಕಾಗದದಲ್ಲಿ ಪೂರ್ಣವಾದ ಅಭಿಪ್ರಾಯವನ್ನು (ಕಾಗದಕ್ಕೆ ಹೊಂದುವಷ್ಟು) ಮೊದಲೇ ಯೋಚಿಸಿ ಕ್ರಮವಾಗಿ ಬರೆಯಿರಿ.

(ಈ) ಓದುವವರಿಗೆ ತಿಳಿಯುವಂತೆ ಅಂದವಾಗಿ ಬರೆಯಿರಿ

(ಉ) ಲೇಖನ ಚಿಹ್ನೆಗಳನ್ನು ಬೇಕಾದ ಸ್ಥಳದಲ್ಲಿ ಉಪಯೋಗಿಸಿ-

೪) **ಸಮಾಪ್ತಿ:**—ಕಾಗದದ ಪ್ರಾರಂಭದಲ್ಲಿ ಯಾವ ವಿಧ ವಂದನೆಯ ಮಾತನ್ನು ಹೇಳಿರುವಿರೋ ಸಮಾಪ್ತಿಯಲ್ಲೂ ಅದೇ ವಿಧವಾಗಿರ ಬೇಕು. (ಮೊದಲು " ನಮಸ್ಕಾರ " ಎಂದು ಪ್ರಾರಂಭಿಸಿ ಕೊನೆಯಲ್ಲಿ " ವಿಜ್ಞಾಪನೆಗಳು " ಎಂದಿರಬಾರದು.)

೫) **ರುಜು:**—ವಂದನಾ ಭಾಗದ ಕೆಳಗೆ ನಿಮ್ಮ ಹೆಸರನ್ನು ಬರೆಯಲು ಮರೆಯಬೇಡಿ.

೬) **ವಿಳಾಸ:**—ಸಾಕಷ್ಟು ಸ್ಥಳ ಬಿಟ್ಟು (ಹೆಸರು—ಉದ್ಯೋಗ —ವಾಸಸ್ಥಳ—ಬೀದಿ—ಊರು—ಜಿಲ್ಲೆ ಈ ಕ್ರಮವಾಗಿ) ಒಂದರ ಕೆಳಗೆ ಒಂದರಂತೆ ಬರೆಯಿರಿ. (ಕನ್ನಡದಲ್ಲಿ ಊರಿನಿಂದ ಪ್ರಾರಂಭಿಸಿ ಕೊನೆಗೆ ವಿಳಾಸದಾರರ ಹೆಸರು ಬರೆಯುವ ವಾಡಿಕೆ ಇರುವುದರಿಂದಲೂ ಇದರಿಂದ ಅಂಚೆಯ ಇಲಾಖೆಯವರಿಗೆ ವಿಳಾಸ ಬೇಗನೆ ಗೊತ್ತಾಗದೆ ಕಾಗದಗಳು ಸರಿಯಾಗಿ ತಲುಪದಿರಲು ಕಾರಣವಾಗುವುದು. ಆದಕಾರಣ ಮೊದಲು

ಹೇಳಿದ ಆಂಗ್ಲ ವಿಳಾಸ ಕ್ರಮವನ್ನೇ ಕನ್ನಡಕ್ಕೆ ಅನ್ವಯಿಸುವುದು ಮೇಲು.] ಹೆಸರಿನೊಡನೆ ಗೌರವಸೂಚಕ ಶಬ್ದಗಳಿದ್ದರೆ ತಿಳಿಸಬೇಕು. (ಮ|| ರಾ|| ಶ್ರೀ|| ವೆಂಕಟರಾಮಯ್ಯ, ಬಿ. ಎ., ಬಿ. ಟಿ., ಆಸ್ಥಾನವಿದ್ವಾನ್ ಶ್ರೀ|| ಉ|| ವೇ|| ಶ್ರೀನಿವಾಸರಂಗಾಚಾರ್ಯರು, ಇತ್ಯಾದಿ.)

## ಕಾಗದ ಬರೆವಣಿಗೆ ಪಟ್ಟಿ.

| | | |
|---|---|---|
| I | | ಆದ್ಯಂತ್ಯಗಳಲ್ಲಿ |
| **೧. ಯಾರಿಗೆ** | **೨. ಸಂಬೋಧನೆ** | **೩. ವಂದನಾ ರೀತಿ** |
| ೧) ಗಂಡಸರಲ್ಲಿ ೧) ಲೌಕಿಕ | ಮ|| ರಾ|| | ನಮಸ್ಕಾರಗಳು |
| | (ಮಹಾರಾಜೇಶ್ರೀ) | [ವಂದನೆ, ಪ್ರಣಾಮ, |
| ಹಿರಿಯರು ೨) ವೈದಿಕ | ಶ್ರೀ|| ಬ್ರ|| ಶ್ರೀ|| | ನಮಸ್ಕಾರ ಒಂದೇ |
| | ವೇದಮೂರ್ತಿ | ಅರ್ಥ ಉಳ್ಳವು] |
| ೨) ಬಂಧುಗಳು ತಂದೆಗೆ | ತೀರ್ಥರೂಪರವರಿಗೆ | ,, ಅಥವಾ ಸಾಷ್ಟಾಂಗ |
| ತಂದೆ ಮತ್ತು ಇತರ | ತಿ|| ಚಿಕ್ಕಪ್ಪನವರಲ್ಲಿ | ಪ್ರಣಾಮಗಳು |
| ನೆಂಟರು | ಇತ್ಯಾದಿ | |
| ೩) ಮಿತ್ರರು | ಪ್ರಿಯ ಮಿತ್ರನೇ ಅಥವಾ | ನಮಸ್ಕಾರಗಳು |
| | ಪ್ರಿಯ ಸ್ನೇಹಿತನಾದ....ಗೆ | ಅಥವಾ |
| | ಅಥವಾ ಮಿತ್ರನಾದ....ಗೆ | ವಿಜ್ಞಾಪನೆಗಳು |
| ೪) ಕಿರಿಯರು | ಚಿರಂಜೀವಿಗೆ | ಆಶೀರ್ವಾದಗಳು |
| | **ಆದಿ** | **ಅಂತ್ಯ** |
| II **ಹೆಂಗಸರು** | | |
| ೧) ತಾಯಿ ಮತ್ತು ಇತರ | ಮಾತೃ ಶ್ರೀ | ನಮಸ್ಕಾರಗಳು |
| ಹಿರಿಯರು | (ಮಾ|| ಶ್ರೀ||) | |
| ೨) ಕಿರಿಯರು | ಚಿ|| ಸೌ|| | |
| (ಸುಮಂಗಲಿಯರು) | (ಚಿರಂಜೀವಿ ಸೌಭಾಗ್ಯವತಿ) | ಆಶೀರ್ವಾದಗಳು |
| ೩) ವಿಧವೆಯರು | ಭಾಗೀರಥೀಸಮಾನರಾದ | ನಮಸ್ಕಾರಗಳು |
| | .... ಅಥವಾ ಶ್ರೀಮತಿ | ವಿಜ್ಞಾಪನೆಗಳು |

## ಕಾಗದದ ಬಗೆಗಳು

ಕಾಗದದ ಉದ್ದೇಶದ ಪ್ರಕಾರವಾಗಿ ಗೃಹಕೃತ್ಯದ ಅಥವಾ ಸಾಮಾಜಿಕ ಕಾಗದವೆಂದೂ ವ್ಯವಹಾರಿಕ ಕಾಗದವೆಂದೂ ಎರಡು ವಿಧವಾಗಿ ವಿಂಗಡಿಸಬಹುದು.

೧. **ಸಾಮಾಜಿಕ ಕಾಗದ**—ಈ ಗುಂಪಿನಲ್ಲಿ ಬಂಧುಗಳಿಗೂ ಸ್ನೇಹಿತರಿಗೂ ಬರೆದ ಕಾಗದಗಳೂ, ಆಹ್ವಾನ ಪತ್ರಿಕೆಗಳೂ, ಗಣನೆಗೆ ಬರುವುವು.

೨. ವ್ಯವಹಾರಕ್ಕೆ ಪತ್ರವ್ಯವಹಾರ ಅರ್ಜಿ, ವಿವಿಧ ಇಲಾಖೆಗೆ ಬರೆದ ಕಾಗದಗಳೂ ಸೇರುತ್ತವೆ.

### ೨. ಸಾಮಾಜಿಕ ಕಾಗದಗಳು.

### (೧) ಸ್ನೇಹಿತರ ಕಾಗದಗಳು:—

ಬಂಧುಗಳಿಗೂ ಪ್ರಿಯಮಿತ್ರರಿಗೂ ಬರೆಯುವ ಕಾಗದಗಳು ಮಾತನಾಡುವ ಸುಲಭ ಶೈಲಿಯಲ್ಲಿರಬೇಕು. ಮುಚ್ಚುಮರೆಯಿಲ್ಲದೆ ಅವರಿಗೆ ನಮ್ಮ ಅಭಿಪ್ರಾಯ ತಿಳಿಸಬಹುದಾದರೂ ಅವುಗಳಲ್ಲಿ ಒಂದು ಮಿತಿಯೂ ಕ್ರಮವೂ, ಸುಲಭಶೈಲಿಯೂ ಮತ್ತು ವ್ಯಾಕರಣ ಸಮ್ಮತಮಾರ್ಗವೂ ಇರಬೇಕು. ಆಪ್ತ ಸ್ನೇಹಿತರಿಗೆ ಕಾಗದದ ಆದಿಯಲ್ಲಿ ಪ್ರಿಯಮಿತ್ರನಾದ....ಗೆ ಎಂದೂ, ಪ್ರಿಯಮಿತ್ರನೇ ಅಥವಾ ಸ್ನೇಹಿತನೇ ಎಂದೂ, ಕೊನೆಯಲ್ಲಿ ಇತಿ, ನಿನ್ನ ಪ್ರಿಯಮಿತ್ರನೆಂದೂ, ಇತಿ ವಿಜ್ಞಾಪನೆ ಅಥವಾ ವಂದನೆಯೆಂದೂ, ಬರೆಯಬಹುದು. ಹಿರಿಯ ಮಿತ್ರರಿಗೆ ಪ್ರಿಯಮಿತ್ರನಾದ ಮ|| ರಾ||........ ....ಸ|| ಕ್ಕೆ........ನಮಸ್ಕಾರಗಳು ಎಂದು ಪ್ರಾರಂಭಿಸಬೇಕು.

### (೨) ಆಹ್ವಾನ ಪತ್ರಿಕೆಗಳು

ಆಹ್ವಾನ ಪತ್ರಿಕೆಗಳು ಬೇರೆಬೇರೆ ಸಂದರ್ಭಗಳಲ್ಲಿ ಬೇರೆಬೇರೆಯಾಗಿರುವುದು. ಅದರಲ್ಲಿ ಲೇಖನವು ಸಾಧಾರಣವಾಗಿ ಪ್ರಥಮ ಪುರುಷ

ದಲ್ಲಿರಬೇಕು. ಕೊನೆಯಲ್ಲಿ ಆಹ್ವಾನಕರ್ತರ ಹೆಸರೂ, ತಾರೀಖು ಬಲಗಡೆಯುಲ್ಲಿರಬೇಕು. (ಸಂತೋಷ ಕೂಟ, ಸಭೆ, ಉತ್ಸವ, ಲಗ್ನಪತ್ರಿಕೆ ಮತ್ತು ಸಣ್ಣ ಪುಟ್ಟ ಆಹ್ವಾನಗಳಲ್ಲಿ ಪ್ರತಿಯೊಂದರ ಬರೆವಣಿಗೆಯ ರೀತಿಯೂ ಬೇರೆಬೇರೆ ಮಾದರಿಯಲ್ಲಿರಬೇಕು.)

## (೩) ವ್ಯವಹಾರ ಕಾಗದಗಳು

ವ್ಯವಹಾರ ಕಾಗದಗಳು ಎಂದರೆ ವ್ಯಾಪಾರಾದಿ ವ್ಯವಹಾರಗಳು ಅಚ್ಚುಕಟ್ಟಾಗಿಯೂ, ಕೇಳಿದಷ್ಟಿರಬೇಕಲ್ಲದೆ ಸಂಕ್ಷೇಪವಾಗಿಯೂ, ಸ್ಪಷ್ಟವಾಗಿಯೂ ಇರಬೇಕು. ಕನ್ನಡದಲ್ಲಿ ವ್ಯಾಪಾರಾದಿ ವ್ಯವಹಾರಕ್ಕೆ ಸಂಬಂಧಪಟ್ಟ, ಕಾಗದಗಳಲ್ಲಿ ಲೋಕರೂಢಿಯಾದ ಮಾತುಗಳೂ ಇಂಗ್ಲೀಷ್ ಭಾಷೆಯ ಪದಗಳೂ ಅನಿವಾರ್ಯಗಳು (ಉದಾ:—ವಿ. ಪಿ, ಚಕ್, ಮನಿಯಾರ್ಡರ್ ಇತ್ಯಾದಿ) ಈ ಪತ್ರ ಲೇಖನದಲ್ಲಿ ಗೌರವ ಸಂಬೋಧನೆಯೂ, ಕಾಗದದ ಉಚಿತ ಸಂಗತಿಯೂ ಇಬ್ಬರ (ಕಳುಹಿಸುವವರ ಮತ್ತು ತೆಗೆದುಕೊಳ್ಳುವವರ) ವಿಳಾಸ, ತಾರೀಖುಗಳೂ ಬಹಳ ಮುಖ್ಯವಾದುವುದೆಂಬುದನ್ನು ತಿಳಿಯಬೇಕು. [ಯಾವುದೊಂದಿಲ್ಲದಿದ್ದರೂ, ವ್ಯವಹಾರ ನಿಂತು ಹೋಗುವುದು.]

## (೪) ಅರ್ಜಿಯ ರೀತಿ

ಯಾವುದೊಂದು ಕೆಲಸ (ಉದ್ಯೋಗ)ವಾಗುವುದಕ್ಕೆ ಬರೆದು ಕೊಳ್ಳುವ ಅರ್ಜಿಯಲ್ಲಿ ಮೊದಲು

(ಅ) ಸ್ವಂತವಾಗಿಯಾಗಲಿ ಪ್ರಕಟಣೆಯ ಮೂಲಕವಾಗಿಯಾಗಲಿ ತಿಳಿದುಬಂದ ಸಂಗತಿಯ ಸಣ್ಣ ಪೂರ್ವ ಪೀಠಿಕೆಯಿರಬೇಕು.

(ಆ) ತನ್ನ ವಯಸ್ಸು, ವಿದ್ಯಾಭ್ಯಾಸ ಮತ್ತು ಅನುಭವಗಳ ಪರಿಚಯ ಮಾಡಿಕೊಡಬೇಕು.

(ಇ) ಯೋಗ್ಯತಾಪತ್ರಿಕೆಗಳನ್ನೂ, ಇತರ ಸಂಬಂಧಪಟ್ಟ ಸಂಗತಿಗಳನ್ನೂ, ಅರ್ಜಿದಾರನ ಮುಖ್ಯಾಸಕ್ತಿಯನ್ನೂ ಕೊನೆಯಲ್ಲಿ ಸಂಗ್ರಹಿಸಬೇಕು.

ಅರ್ಜಿಯ ಕಾಗದಗಳು ಒಟ್ಟಿನಲ್ಲಿ ವ್ಯವಹಾರಕಾಗದ ರೀತಿಯಲ್ಲಿರಬೇಕೇ ಹೊರತು ಗೃಹಕೃತ್ಯದ ಕಾಗದದಂತಿರ ಬಾರದು.

(ಈ) ಇತರ ಕಾಗದಗಳು

(ಅ) ಉದ್ಯೋಗಕ್ಕೆ ಸಂಬಂಧಪಟ್ಟ ಪತ್ರಗಳಲ್ಲಿ ಅಧಿಕಾರಿಗಳನ್ನು ಕುರಿತು ಬರೆಯುವಾಗ ಸಾಧಾರಣ ಸಂದರ್ಭಗಳಲ್ಲಿ ಅವರ ಹೆಸರನ್ನೂ ಬರೆಯದೆ ಉದ್ಯೋಗಕ್ಕೆ ಸಂಬಂಧಿಸಿದ ಅಧಿಕಾರಿಯೆಂದು ಮಾತ್ರ [ಉದಾ: ಶಾಲಾಮುಖ್ಯಾಧಿಕಾರಿಗಳಿಗೆ, ಜಿಲ್ಲಾಧಿಕಾರಿಗಳಿಗೆ, ಇತ್ಯಾದಿ ರೀತಿಯಲ್ಲಿ] ತಿಳಿಸಬೇಕು. (ಸ್ವಾಮಿ ಎಂದು ಬರೆವಣಿಗೆಯಲ್ಲಿ ಸಂಭೋದಿಸಬೇಕೇ ಹೊರತು ರಾಜರನ್ನು ಕುರಿತು ಹೇಳುವ ಮಹಾಸ್ವಾಮಿಯೆಂಬ ಮಾತಿರಕೂಡದು) ಕೊನೆಯ ಭಾಗದಲ್ಲಿ ತಮ್ಮ ಸೇವಕ ಎಂದಾಗಲಿ ಅಥವಾ (ಅತ್ಯಂತ) ವಿಧೇಯ ಎಂದಾಗಲೀ ಬರೆದು ರುಜು ಹಾಕಿರಬೇಕು.

(ಆ) ಪತ್ರಿಕಾಕರ್ತರಿಗೆ ಬರೆವ ಪತ್ರಗಳಲ್ಲಿ (ಆಯಾ ಪತ್ರಿಕೆಯ) ಸಂಪಾದಕರಿಗೆ ಎಂದೂ, 'ಸ್ವಾಮಿ' ಎಂದೂ ಗೌರವಿಸಿ ಬರೆಯಬೇಕು. ಕೆಲವರು ಅಡ್ಡ ಹೆಸರುಗಳನ್ನು ತಿಳಿಸಿ ಪತ್ರಿಕೆಗಳಿಗೆ ಲೇಖನಗಳನ್ನು ಕೊಡು ವರಾದರೂ ಬೇರೆ ಕಡೆ ತಮ್ಮ ಪೂರ್ತಿ ಹೆಸರನ್ನು ತಿಳಿಸಬೇಕು. ಯಾರಿಗೇ ಆಗಲೀ ಮೂಗರ್ಜಿಗಳನ್ನು ಬರೆಯಬಾರದು.

ವಿಳಾಸದ ಮಾದರಿ.

ಶ್ರೀಮಾನ್ ಶ್ರೀನಿವಾಸರಂಗಚಾರ್ಯರವರ

ಆಸ್ಥಾನ ವಿದ್ವಾಂಸರು,

ರಾಮಾನುಜರಸ್ತೆ,

ಮೈಸೂರು.

# ಮಾದರಿ ಕಾಗದಗಳು

## (೧) ಮಗನು ತಾಯಿಗೆ ಬರೆದ ಕಾಗದ

ಕ್ಷೇಮ ಮಧುಗಿರಿ.

ಜುಲೈ 9, 1948.

ಮಾತೃ ಶ್ರೀಯವರ ಚರಣಸನ್ನಿಧಿಯಲ್ಲಿ ಬಾಲಕ ರಂಗನು ಮಾಡುವ ಸಾಷ್ಟಾಂಗ ನಮಸ್ಕಾರಗಳು. ಉ॥ಕ॥ಸಾಂ॥

ನಾನು ನೆನ್ನೆ ಮಧ್ಯಾಹ್ನ ೩ ಘಂಟೆಗೆ ಇಲ್ಲಿಗೆ ಸೌಖ್ಯವಾಗಿ ಬಂದು ಸೇರಿದೆನು. ವ್ಯಾಸಂಗಕ್ಕೆ ಪ್ರತ್ಯೇಕವಾದ ಕೊಠಡಿಯು ಇನ್ನೂ ಸಿಕ್ಕಿಲ್ಲ. ಬಾಡಿಗೆ ಬಹಳ ಜಾಸ್ತಿ ಹೇಳುತ್ತಿದ್ದಾರೆ. ಈಗ ಸದ್ಯಕ್ಕೆ ಈ ಊರಿನ ಛತ್ರದ ಒಂದು ಕೊಠಡಿಯಲ್ಲಿ ನನ್ನ ಸ್ನೇಹಿತನ ಜೊತೆಯಲ್ಲಿ ನಾನೂ ವಾಸ ವಾಗಿದ್ದೇನೆ. ಇನ್ನೂ ವಾರ ಸಿಕ್ಕಿಲ್ಲವಾದ್ದರಿಂದ ಭಿಕ್ಷಾನ್ನ ಮಾಡುತ್ತಿದ್ದೇನೆ. ನನ್ನ ತರಗತಿ ಜೊತೆಗಾರನಾದ ನಾರಾಯಣಸ್ವಾಮಿಯು ಬಹಳ ಸಹಾಯ ಮಾಡುತ್ತಿದ್ದಾನೆ.

ಈ ದಿನ ಹೈಸ್ಕೂಲಿನ ಮೊದಲನೆ ತರಗತಿಗೆ ಸೇರಿಕೊಂಡೆ. ಎರಡು ಹಳೆ ಪುಸ್ತಕಗಳನ್ನೂ ಒಂದು ಇಂಗ್ಲೀಷ್ ಹೊಸಪುಸ್ತಕವನ್ನೂ ತೆಗೆದುಕೊಂಡೆ ಚೆನ್ನಾಗಿ ಓದಿಕೊಳ್ಳುವ ಪ್ರಯತ್ನ ಮಾಡುತ್ತಿದ್ದೇನೆ. ಮುಂದೆ ಎಲ್ಲವನ್ನೂ ತಿಳಿಸುತ್ತೇನೆ. ಮನೆಯಲ್ಲಿ ನಿಮ್ಮೆಲ್ಲರ ಯೋಗಕ್ಷೇಮಕ್ಕೆ ಬರೆಯುವುದು.

ಇತಿ

ನಮಸ್ಕಾರಗಳು,

(ರುಜು) ರಂಗ.

## (೨) ಕೆಲಸಕ್ಕೆ ಅರ್ಜಿ ಹಾಕಿಕೊಳ್ಳುವುದು.

ವಿದ್ಯಾಧಿಕಾರಿಗಳಿಗೆ,
ಚಿತ್ರದುರ್ಗ ಜಿಲ್ಲೆ,
ಚಿ ತ್ರ ದು ರ್ಗ.

ಸ್ವಾಮಿ,

ಈ ಕೆಳಗೆ ರುಜು ಹಾಕಿರುವ ನಾನು ೧೯೪೫ ರಲ್ಲಿ ಮಾಧ್ಯಮಿಕ ಶಾಲಾ ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣನಾಗಿರುತ್ತೇನೆ. ನನ್ನ ರಿ. ನಂ. 7846. ನನ್ನ ವಯಸ್ಸು ಹದಿನಾರು ಮಾತ್ರ. ನನ್ನ ತಾಯಿ ತಂದೆಗಳು ಬಹಳ ಬಡವರಾದುದರಿಂದ ಸದ್ಯಕ್ಕೆ ನಾನು ಮುಂದೆ ವ್ಯಾಸಂಗ ಮಾಡಲು ಅನುಕೂಲವಿಲ್ಲದಿರುವುದರಿಂದ ಜೀವಿಕೆಗಾಗಿ ಯಾವುದಾದರೊಂದು ಕೆಲಸಕ್ಕೆ ಸೇರಬೇಕಾಗಿದೆ. ಈಗ ಜಗಳೂರಿನ ಪ್ರಾಥಮಿಕ ಶಾಲೆಯಲ್ಲಿ ಒಬ್ಬ ಉಪಾಧ್ಯಾಯರ ಕೆಲಸವು ಖಾಲಿಯಾಗಿರುವುದಾಗಿ ತಿಳಿಯುತ್ತೇನೆ. ದಯವಿಟ್ಟು ಕೆಲಸಕ್ಕೆ ನನ್ನನ್ನು ನೇಮಕ ಮಾಡಿಕೊಂಡು ನನಗೆ ಸಹಾಯ ಮಾಡಬೇಕಾಗಿ ದೈನ್ಯದಿಂದ ತಮ್ಮನ್ನು ಬೇಡಿಕೊಳ್ಳುತ್ತೇನೆ. ತಮ್ಮ ದಯಾಪೂರ್ಣ ಉತ್ತರವನ್ನು ಎದುರು ನೋಡುತ್ತೇನೆ.

ನನ್ನ ವಿಳಾಸ: ಇತಿ

ಜಿ. ಕರಿಯಪ್ಪ, ತಮ್ಮ ಅತ್ಯಂತ ವಿಧೇಯ,

64 ನಂ., ಅಂಗಡಿ ಬೀದಿ, ಜಿ. ಕರಿಯಪ್ಪ.

ಜ ಗ ಳೂ ರು.

---

## ಅಭ್ಯಾಸ ೧.

ಈ ಕೆಳಗೆ ಕಂಡವರಿಗೆ ಬೇರೆಬೇರೆ ವಿಷಯಗಳನ್ನು ಕುರಿತು ಬೇರೆ ಬೇರೆ ರೀತಿಯ ಕಾಗದಗಳನ್ನು ಬರೆಯಿರಿ.

1. **ಮಿತ್ರನಿಗೆ**— 1) ರಜಾ ಕಾಲದಲ್ಲಿ ನಿಮ್ಮೂರಿಗೆ ಬರಬೇಕೆಂದು 2) ನಿಮ್ಮ ಶಾಲೆಯ ಆಟ ಪಾಟಗಳ ವಿಷಯವಾಗಿ. 3) ನಿಮ್ಮೂರಿನ ಜಾತ್ರೆಯ ಸಂಗತಿಯನ್ನು ತಿಳಿಸಿ.

2. **ತಂದೆಗೆ**—1) ಈಗಿನ ವ್ಯಾಸಂಗದ ವಿಷಯವಾಗಿ 2) ಮುಂದಿನ ವಿದ್ಯಾಯೋಚನೆ. 3) ನಿಮ್ಮ ಶಾಲಾ 4) ಸಂಚಾರವನ್ನು ಕುರಿತು

3. **ತಾಯಿಗೆ**— 1) ಯೋಗಕ್ಷೇಮ ಪತ್ರ 2) ಮುಂದಿನ ನಿಮ್ಮ ಆಶೋತ್ತರಗಳು

4. **ಸಹೋದರಿ ಅಥವಾ ಸಹೋದರನಿಗೆ**—1) ಕಿರಿಯವನಿಗೆ ಬುದ್ಧಿವಾದಗಳು 2) ಹಿರಿಯರಿಗೆ—ವ್ಯಾಸಂಗ ಮತ್ತು ಜೀವ ಮಾರ್ಗದಲ್ಲಿ ಸಲಹೆಗಳು.

5. **ಗುರುಗಳಿಗೆ**—1) ಉಪಕಾರ ಸ್ಮರಣೆ 2) ಮುಂದಿನ ವ್ಯಾಸಂಗದಲ್ಲಿ ಸಲಹೆಗಳು,

6. **ವಿದ್ಯಾಧಿಕಾರಿಗಳಿಗೆ**— 1) ಪರೀಕ್ಷೆಗಳ ಅಂಕೆಗಳನ್ನು ತಿಳಿಸಬೇಕೆಂದು 2) ಮುಂದಿನ ವ್ಯಾಸಂಗದಲ್ಲಿ ಸಲಹೆಗಳು.

7. **ಜಿಲ್ಲಾಧಿಕಾರಿಗಳಿಗೆ**—ಗುಮಾಸ್ತೆಯ ಕೆಲಸಕ್ಕೆ ಅರ್ಜಿ.

8. **ವ್ಯಾಪಾರಿಗಳಿಗೆ**— 1) ನಿಮಗೆ ಬೇಕಾದ ಪುಸ್ತಕಗಳನ್ನು ಕಳುಹಿಸುವಂತೆ 2) ದಿನಸಿ ವಿವರವನ್ನು ಕೇಳಿ ಬೇಕಾದುದನ್ನು ಕಳುಹಿಸುವಂತೆ—ಕಾಗದ ಬರೆಯಿರಿ.

# ಸಂವಾದಗಳು.

ಇಬ್ಬರಲ್ಲಿ ನಡೆವ ಮಾತಿಗೆ ಸಂವಾದವೆನ್ನುವರು. ಇದು ಪ್ರಶ್ನೋತ್ತರ ರೂಪವಾದ ಚರ್ಚೆಯಾಗಿರುವುದು. ವಾಕ್ಯರಚನೆಯಲ್ಲಿ ಸಂವಾದ ಬರೆಹವು ಮುಖ್ಯಾಂಗವು. ಕಥಾರಚನೆಯಲ್ಲೂ, ಇತರ ವಿಧ್ಯಸಂಭಾಷಣೆಗಳಲ್ಲೂ, ಇದರ ಅಗತ್ಯ ಬಹಳ.

ಸಂವಾದ ಬರೆಹವನ್ನು ಸ್ವತಃ ಬರೆಯುವವನು ನಾಟಕಕಾರನ ಪಾತ್ರ ವಹಿಸಬೇಕು. ಇಬ್ಬರು ಕಲ್ಪಿತವ್ಯಕ್ತಿಗಳನ್ನು ಊಹಿಸಿ ಅವರು ತಡೆಯಿಲ್ಲದೆ ಸಹಜವಾಗಿ ಮಾತನಾಡುವಂತೆಯೇ ಬರೆವಣಿಗೆಯಲ್ಲಿಯೂ ಕಾಣಿಸಬೇಕು. ಇದಕ್ಕಾಗಿ ಪೂರ್ವಸಿದ್ಧತೆಯು ಆವಶ್ಯಕ.

ಮೊದಲು ಮಾತನಾಡಲಿರುವವರು ತಿಳಿಸಬೇಕಾದ ಚರ್ಚಾ ವಿಷಯವನ್ನು ಯೋಚಿಸಿ ಬರೆದಿಟ್ಟುಕೊಳ್ಳಬೇಕು, ಅನಂತರ ಒಂದಾದಮೇಲೊಂದು ಬರುವಂತೆ ಒಂದು ಕ್ರಮಕ್ಕೆ ಅಳವಡಿಸಿಕೊಳ್ಳಬೇಕು. ಸಂವಾದ ವ್ಯಕ್ತಿಗಳ ಸ್ವಭಾವಕ್ಕೆ ತಕ್ಕಂತೆ ಪ್ರತಿಯೊಂದು ಪ್ರಸಂಗದಲ್ಲಿಯೂ ಸಮಯೋಚಿತವಾಗಿ ಮಾತನಾಡುವಂತೆ ಕಲ್ಪಿಸಬೇಕು. ಸಂವಾದವು ಮುಗಿದ ಮೇಲೆ ಸ್ವಾಭಾವಿಕ ರೀತಿಯಲ್ಲಿರುವಂತೆ ಪುನರಾವೃತ್ತಿ ಮಾಡಬೇಕು.

### ಮಾದರಿ

### [ಪರೀಕ್ಷೆಯ ಮಾತುಕತೆ]

ಶಂಕರ—ಏನಯ್ಯ ಮಾಧು ? ಬಹಳವಾಗಿ ಯೋಚನೆಮಾಡುವಂತಿದೆ ?
ಮಾಧವ— ಏನಯ್ಯಾ, ತಿಳಿದೂ, ತಿಳಿದು, ಹಂಗಿಸ್ತೀಯೆ ?
ಶಂಕರ— ಹಾಗಂದರೆ..........ಏನು? ನಿನಗೆ ಪರೀಕ್ಷೆ ಆಗಲಿಲ್ಲವೇನು ?
ಮಾ—ಆಗಿದ್ದರೆ ಹೀಗೇಕೆ ಇರುತ್ತಿದ್ದೆ ?
ಶಂ—ಬಿಡಯ್ಯ! ಏನ್ಮಾಡೋಕಾಗುತ್ತೆ? ಎಂತೆಂಥಾವರಿಗೂ ಸೋಲುತಪ್ಪಿದ್ದಲ್ಲ

ನಡೆಯೋನು ಎಡವದೆ ಇರ್ತಾನೆಯೇ? ಹೇಳು ಈ ವರ್ಷ ಆಗ ದಿದ್ದರೆ ಮುಂದಿನ ವರ್ಷ ಆಗುತ್ತೆ ಇದಕ್ಕೆ ಯೋಚನೆ?

ಮಾ—ಇಲ್ಲಪ್ಪ ನನಗೇಕೋ ಬಹಳ................

ಶಂ—ಅಯ್ಯೋ ಹುಚ್ಚೇ? ನೀನೇನಪ್ಪ ಹಿಗಾಡ್ತಿ, ಮುಂದಿನ ವರ್ಷ ಪರೀಕ್ಷೆ ಯಲ್ಲಿ ಮೊದಲನೇ ತರಗತಿಯಲ್ಲೇ ಬರುವಂತೆ, ಓದು.

ಮಾ—ಈ ವರ್ಷಕ್ಕೇ ಸಾಕಪ್ಪ ಓದು ಅನ್ನಿಸಿದೆ, ಇನ್ನು ಮುಂದಿನ ವರ್ಷ ಓದ್ಸೋರ್ಯಾರು? ನಮ್ಮ ತಂದೆಗೆ ತಿಳಿದರೆ...............

ಶಂ—ಅರೆ! ತಿರುಗಾ ನೋಡು ಸುಮ್ನೆ ಬಾ. ಯಾರೂ ಏನೂ ಹೇಳುವುದಿಲ್ಲ. ನಾನು ನಿಮ್ಮ ತಂದೆಗೆ ನಿನ್ನ ವಿಷಯ ಶಿಫಾರ್ಸ್ ಮಾಡುತ್ತೇನೆ ಅವ್ರೇನೂ ಬೇಜಾರು ಮಾಡಿಕೊಳ್ಳುವುದಿಲ್ಲ. ಖಂಡಿತ ಮುಂದೆ ಓದು ವಂತೆ ಬಾ. ಸ್ವಲ್ಪ ಟೀ ತೆಗೆದುಕೊಂಡು ಬರೋಣ.

**ಮುಂದೆ ಕೊಟ್ಟಿರುವ ವಿಚಾರವಾಗಿ ಸಂವಾದಗಳನ್ನು ಬರೆಯಿರಿ.**

1) **ಸ್ನೇಹಿತರಲ್ಲಿ**—(ಅ) ಚಲನ ಚಿತ್ರಗಳ ವಿಚಾರವಾಗಿ (ಆ) ಪ್ರಸಿದ್ಧ ಪಂದ್ಯಗಳ ವಿಷಯವಾಗಿ.

2) **ತಾಯಿ ಮಕ್ಕಳಲ್ಲಿ**—ಹಬ್ಬದ ಖರ್ಚಿನ ಉಳಿತಾಯ ವಿಷಯ ವಾಗಿ.

3) **ತಂದೆ-ಮಕ್ಕಳಲ್ಲಿ**—ವ್ಯಾಸಂಗದಲ್ಲಿ ವಿವಿಧ ಮಾರ್ಗಗಳು—ವೈದ್ಯ ವಕೀಲರ ಪರೀಕ್ಷೆಗಳು—ಇವುಗಳ ಆಯ್ಕೆಯ ವಿಷಯವಲ್ಲಿ ಚರ್ಚೆ

4) **ಗುರು-ಶಿಷ್ಯರಲ್ಲಿ**—ಐಚ್ಛಿಕ ವಿಚಾರವನ್ನು ಆರಿಸಿಕೊಳ್ಳುವುದರಲ್ಲಿ

5) **ಕಸಬುದಾರರಲ್ಲಿ**—ತಮ್ಮ ಕಸಬುಗಳ ಗುಣದೋಷ ಲಾಭಗಳ ವಿಮರ್ಶೆ.

6) **ವ್ಯಾಪಾರಿ-ಕೊಳ್ಳುವವರಲ್ಲಿ**—ದಿನಸಿಯ ಏರಿಳಿತದ ಬಗ್ಗೆ.

7) **ರೈಲ್ವೆ ಪ್ರಯಾಣಿಕರಲ್ಲಿ**---ಸ್ಥಳ ಪರಸ್ಥಳ ಪರಿಚಯ.
8) **ಮೋಟಾರ್-ಸೈಕಲ್**—ಸಂಧಿಯಾದಾಗ ನಡೆವ ಚರ್ಚೆ.
9) **ವೈದ್ಯ ರೋಗಿಗಳಲ್ಲಿ**---ದೇಹಸ್ಥಿತಿಯನ್ನು ಕುರಿತು
10) **ಅಧಿಕಾರಿ-ಚಾಕರಿ ಕೇಳುವವರಲ್ಲಿ**---ಕೆಲಸದ ಯೋಗ್ಯತೆಯ ವಿಷಯದಲ್ಲಿ.

---

# ಮಾದರಿ ಪ್ರಬಂಧಗಳು.

[ಸೂ.:— ಫ್ರಾನ್ಸಿಸ್ ಬೇಕನ್ನನು ಬರೆದಿರುವ "ವ್ಯಾಸಂಗ" ಎಂಬ ಪ್ರಬಂಧವನ್ನು ಶ್ರೀಮಾನ್ ಎಸ್. ಮಂಜನಾಥ್. ಎಂ. ಎ., ಅವರ "ಇಂಗ್ಲೀಷ್ ಪ್ರಬಂಧಗಳು" ಎಂಬ ಪುಸ್ತಕದಿಂದ ಆರಿಸಿ ಕೊಡಲಾಗಿದೆ.]

## ೧. ವ್ಯಾಸಂಗ

ವ್ಯಾಸಂಗದ ಪ್ರಯೋಜನ ಸಂತೋಷ, ಅಲಂಕಾರ ಮತ್ತು ದಕ್ಷತೆ ಅಂದರೆ ಅದು ಏಕಾಂತದಲ್ಲಿ ವಿಶ್ರಮಿಸಿಕೊಳ್ಳುವಾಗ ಸಂತೋಷಕೊಡುವುದು; ಸಂಭಾಷಣೆಯಲ್ಲಿ ಭೂಷಣವಾಗುವುದು : ಕೆಲಸ ಕಾರ್ಯಗಳಲ್ಲಿ ಸಾಮರ್ಥ್ಯವನ್ನುಂಟುಮಾಡುವುದು. ನಿಪುಣರು ಒಂದೊಂದು ವಿಚಾರವನ್ನೂ ಆಮೂಲಾಗ್ರವಾಗಿ ವಿಮರ್ಶೆಮಾಡಬಹುದು, ತೀರ್ಮಾನಕ್ಕೆ ಬರಬಹುದು, ಸಾಧಿಸಬಹುದು. ಆದರೆ ಉಪಯುಕ್ತತೆ, ವಿವೇಕ, ಕಾರ್ಯದಕ್ಷತೆ, ಮೇಲ್ವಿಚಾರಣೆಯ ಶಕ್ತಿ ಇವು ಉತ್ತಮವಾಗಿರುವುದು ಸುಶಿಕ್ಷಿತರು ವ್ಯಾಸಂಗದಲ್ಲಿ ಬಹಳ ಕಾಲಕಳೆಯುವುದು ಸೋಮಾರಿತನ; ಆಡಂಬರಕ್ಕಾಗಿಯೇ ಅದನ್ನು ಉಪಯೋಗಿಸುವುದು ಜಂಭ, ಅದರ ನಿಯಮವನ್ನು ಅನುಸರಿಸಿಯೆ ತೀರ್ಮಾನ ಹೇಳುವುದು ಪಂಡಿತನ ಮನೋಭಾವ. ವ್ಯಾಸಂಗ

ಪ್ರಕೃತಿಯನ್ನು ಪೂರ್ಣಮಾಡುವುದು, ಅದು ಅನುಭವದ ಸಹಾಯದಿಂದ ಪರಿಪೂರ್ಣವಾಗುವುದು. ಸ್ವಾಭಾವಿಕವಾದ ಶಕ್ತಿ ಸಹಜವಾಗಿ ಬೆಳೆಯುವ ಗಿಡದಂತೆ; ಅದಕ್ಕೆ ವ್ಯಾಸಂಗದ ಕೃಷಿ ಆವಶ್ಯಕ. ವ್ಯಾಸಂಗ ತೋರಿಸುವ ಮಾರ್ಗ ಸ್ಥೂಲವಾದದ್ದು, ನಿರ್ದಿಷ್ಟವಾದುದಲ್ಲ. ಆದರೆ ಅದು ಅನುಭವದೊಡನೆ ಕೂಡಿದ್ದರೆ ಹಾಗಿರುವುದಿಲ್ಲ. ವ್ಯಾಸಂಗವನ್ನು ಯುಕ್ತಿವಂತರು ನಿಂದಿಸುವರು. ಸಾಧಾರಣ ಜನರು ಮೆಚ್ಚುವರು. ವಿವೇಕಿಗಳು ಉಪಯೋಗಿಸುವರು. ಏಕೆಂದರೆ ವ್ಯಾಸಂಗ ತನ್ನ ಉಪಯೋಗವನ್ನು ತಾನೆ ಹೇಳಿಕೊಡುವುದಿಲ್ಲ. ಅದರ ಉಪಯೋಗವೆಂದರೆ ಅದಕ್ಕೆ ಹೊರಗಿರುವ, ಅದಕ್ಕೆ ಮೇಲಾಗಿರುವ, ಚಿತ್ತವಿಟ್ಟು ನೋಡುವುದರಿಂದ ಲಭಿಸುವ ವಿವೇಕ. ಸುಮ್ಮನೆ ವಿರೋಧಿಸುವುದಕ್ಕೆ, ಬಾಯಿಮುಚ್ಚಿಸುವುದಕ್ಕೆ ಅಥವಾ ನಂಬುವುದಕ್ಕೆ, ಹೇಳಿದ್ದನ್ನೆಲ್ಲಾ ಒಪ್ಪುವುದಕ್ಕೆ ಅಥವಾ ಮಾತನಾಡುವುದಕ್ಕೆ, ಸಂಭಾಷಣೆಗೆ— ಇವಕ್ಕೆ ಮಾತ್ರವೇ ವ್ಯಾಸಂಗಮಾಡಬೇಡಿ. ವಿಚಾರ ಮಾಡುವುದಕ್ಕೂ ಬಲಾಬಲಗಳನ್ನು ತೂಕಮಾಡುವುದಕ್ಕೂ ವ್ಯಾಸಂಗಮಾಡಿ. ಕೆಲವು ಪುಸ್ತಕಗಳು ರುಚಿನೋಡಲು ಮಾತ್ರ ತಕ್ಕವು; ಇನ್ನು ಕೆಲವು ಒಟ್ಟಿಗೇ ನುಂಗಲು ತಕ್ಕವು; ಮತ್ತೆ ಕೆಲವು ಚೆನ್ನಾಗಿ ಅಗಿದು ಜೀರ್ಣಿಸಿಕೊಳ್ಳಲು ತಕ್ಕವು. ಎಂದರೆ ಕೆಲವು ಪುಸ್ತಕಗಳ ಭಾಗಗಳನ್ನು ಮಾತ್ರ ಓದಬೇಕು. ಇನ್ನು ಕೆಲವುಗಳಲ್ಲಿ ಬಿಡಿ ವಿವರಗಳನ್ನು ಬಿಟ್ಟು ಮುಖ್ಯವಾದ್ದನ್ನು ಮಾತ್ರ ಓದಬೇಕು. ಮತ್ತೆ ಕೆಲವನ್ನು ಸಂಪೂರ್ಣವಾಗಿ ಶ್ರದ್ಧೆಯಿಂದಲೂ ಎಚ್ಚರಿಕೆಯಿಂದಲೂ, ಓದಬೇಕು. ಕೆಲವು ಪುಸ್ತಕಗಳನ್ನು ಇತರರ ಮೂಲಕ ಓದಿಸಿ ಕೇಳಬಹುದು. ಅವುಗಳ ಸಾರಾಂಶವನ್ನು ಅವರಿಂದ ತಿಳಿಯಬಹುದು. ಆದರೆ ಅದು ಮುಖ್ಯವಲ್ಲದ ವಿಚಾರಗಳಲ್ಲಿ ಕಡಿಮೆ ಮಟ್ಟದ ಪುಸ್ತಕಗಳಲ್ಲಿ ಬಟ್ಟಿಯಿಳಿಸಿದ ಪುಸ್ತಕಗಳು, ಬಟ್ಟಿಯಿಳಿಸಿದ ನೀರಿನಂತೆ ರುಚಿಯಿರುವುದಿಲ್ಲ. ವ್ಯಾಸಂಗ ಮನುಷ್ಯನನ್ನು ಪುಷ್ಟನನ್ನಾಗಿ ಮಾಡುವುದು; ಸಂಭಾಷಣೆ ಜಾಗೃತನನ್ನಾಗಿ ಮಾಡುವುದು, ಬರೆಯುವುದು ಖಂಡಿತ ಜ್ಞಾನಿಯನ್ನಾಗಿ ಮಾಡುವುದು.

---

# ೨. ಆಕಾಶವಾಣಿ ಯಂತ್ರ

## (ರೇಡಿಯೋ)

ಆಕಾಶವಾಣಿಯು ಆತ್ಯಾಶ್ಚರ್ಯಕರವಾದ ನವೀನ ಶೋಧನೆಗಳಲ್ಲಿ ಒಂದಾಗಿದೆ. ಇದು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಗಾಳಿಯ ಮೂಲಕ ಧ್ವನಿ ಪ್ರಸಾರ ಮಾಡುವ ಒಂದು ವ್ಯವಸ್ಥೆಯಾಗಿದೆ. ಕ್ರಿ. ಶಕ 1896 ರಲ್ಲಿ ಇಟಲಿ ದೇಶದ "ಮಾರ್ಕೋನಿ" ಎಂಬ ವಿಜ್ಞಾನಿಯು ರೇಡಿಯೋ ಯಂತ್ರವನ್ನು ರಚಿಸಿದನು. ಅನಂತರ ಬಂದ ವಿಜ್ಞಾನಿಗಳು ಈಗ ಉಪಯೋಗದಲ್ಲಿರುವ ಆಕಾಶವಾಣಿ ಯಂತ್ರವನ್ನು ಸಾರ್ವಜನಿಕರ ಉಪಯೋಗಕ್ಕೆ ತರಲು ಕಾರಣರಾದರು.

ಗಾಳಿಯಲ್ಲಿ ಅಲೆ ಅಲೆಯಾಗಿ ಸಂಚರಿಸುವ ಧ್ವನಿಯನ್ನು ಹಿಡಿಯುತ್ತಕ್ಕ ಮತ್ತು ಬಿಡುವ ಆಧಾರದ ಮೇಲೆ ಈ ಯಂತ್ರವು ನಿರ್ಮಿತವಾಗಿದೆ, ಧ್ವನಿ ವಾಹಕ ಯಂತ್ರಗಳಿಂದ ಧ್ವನಿಯು ಎಲ್ಲಾ ಕಡೆಗೂ ಬಿಡಲ್ಪಟ್ಟು ಧ್ವನಿ ವರ್ಧಕ ಯಂತ್ರಗಳ ಮೂಲಕ ಶಬ್ದವು ಇರುವ ರೀತಿಯಲ್ಲಿಯೇ ಹೊರ ಬೀಳುತ್ತದೆ. ಈ ವಿಧಾನದಿಂದಲೇ ಪ್ರಪಂಚದ ಯಾವುದಾದರೊಂದು ಮೂಲೆಯಲ್ಲಿ ನಡೆಯುವ ಸಂಗೀತವಾಗಲಿ, ಇತರ ಸಂಗತಿಗಳಾಗಲಿ ನಾವು ಇರುವಡೆಗಳಲ್ಲಿಯೇ ಕೇಳಬರುವುದಾಗಿದೆ.

ನಮಗೆ ಆಕಾಶವಾಣಿಯು ಅನೇಕ ವಿಧವಾದ ಅನುಕೂಲಗಳನ್ನು ಒದಗಿಸಿದೆ. ಎಲ್ಲರಲ್ಲೂ ಸಂತೋಷ ಸೌಖ್ಯಗಳನ್ನು ಹರಡಿದೆ. ಕರ್ಣಾನಂದಕರವಾದ ಸಂಗೀತ ಸುಧಾಪಾನವನ್ನು ಕೇಳಿದವರಿಗೆಲ್ಲರಿಗೂ ಇದು ಮಾಡಿಸುತ್ತದೆ. ಎಷ್ಟು ಹಣ ಖರ್ಚುಮಾಡಿದರೂ ಮತ್ತು ಎಷ್ಟು ಶ್ರಮಪಟ್ಟರೂ ಸಾಧ್ಯವಾಗದ ಸಂಗೀತವನ್ನು ಸುಲಭವಾಗಿ ಈ ಯಂತ್ರವು ಕೇಳಿಸುತ್ತದೆ.

ಪಾಶ್ಚಾತ್ಯ ದೇಶಗಳಲ್ಲಿ ಆಕಾಶವಾಣಿಯು ವಿದ್ಯಾಪ್ರಚಾರಕ್ಕೆ

ಉಪಯೋಗಿಸಲ್ಪಡುತ್ತದೆ. ಅಲ್ಲಿ ವಿದ್ಯಾರ್ಥಿಗಳಿಗೂ ಬೋಧಕರು ಈ ಯಂತ್ರವನ್ನು ವಿದ್ಯಾಭ್ಯಾಸ ಮಾಡಿಸುವುದಕ್ಕೂ ಉಪಯೋಗಿಸುತ್ತಿದ್ದಾರೆ. ಈಚೆಗೆ ನಮ್ಮ ದೇಶದಲ್ಲಿಯೂ ಸಂಗೀತ ಪಾಠಸಂಭಾಷಣಾದಿಗಳು ಆಯಾ ಪ್ರಾಂತ ಭಾಷೆಗಳಲ್ಲಿ ಪ್ರಚಾರ ಮಾಡಲಾಗುತ್ತಿದೆ. ದೇಶ ವಿದೇಶಗಳಲ್ಲಿರುವ ಶ್ರೀಮಂತರು ತಮ್ಮ ಮೋಟಾರು ವಾಹನಗಳಲ್ಲಿಯೂ ಕೂಡ ಈ ಶಬ್ದಗ್ರಾಹಕ ಯಂತ್ರವನ್ನು ಉಪಯೋಗಿಸಿಕೊಂಡು ಬೇಕಾದ ಪ್ರಯೋಜನವನ್ನು ಪಡೆಯುತ್ತಿರುವರು. ಅಕ್ಷರಾಭ್ಯಾಸ ಮತ್ತು ಪ್ರಜಾ ಮತ್ತು ಗ್ರಾಮಾಭ್ಯುದಯ ಕಾರ್ಯಗಳಲ್ಲಿ ಇದರ ಪ್ರಯೋಜನವು ಬಹಳ. ರಾಜಕಾರಣಪಟುಗಳು ಪ್ರತಿಯೊಂದು ಕ್ಷಣದಲ್ಲೂ ಈ ಯಂತ್ರದ ಕೈ ಗೊಂಬೆಯಾಗಿರುವರು.

ನಾವೆಗಳಿಗೂ ಮತ್ತು ವಿಮಾನಗಳಿಗೂ ರೇಡಿಯೋಯಂತ್ರದ ಪ್ರಯೋಜನವು ಅಷ್ಟಿಷ್ಟಲ್ಲ. ಇದರ ಸಹಾಯದಿಂದ ಈ ವಾಹನಗಳು ಭೂಗೋಳದ ಯಾವ ಭಾಗದಲ್ಲಿದ್ದರೂ ಸರಿಯೇ ತಮ್ಮ ಅಪಾಯ ಕಾಲಗಳಲ್ಲಿ ಇತರ ವಾಹನ ಅಥವಾ ಸಾಧನವಸ್ತುಗಳನ್ನು ತರಿಸಿಕೊಂಡು ರಕ್ಷಣೆಯನ್ನು ಪಡೆಯುವರು.

ವಿಜ್ಞಾನಿಗಳು ಆಕಾಶವಾಣಿ ಯಂತ್ರವನ್ನು ಮತ್ತಷ್ಟು ಪ್ರಬಲದಾಯಕವಾಗಿ ಮಾಡುತ್ತಿರುವರು. ಇದುವರೆಗೆ ಕಿವಿಯಿಂದ ಮಾತ್ರ ಕೇಳುತ್ತಿದ್ದುದರ ಜೊತೆಗೆ ಮಾತನಾಡುವವರನ್ನೂ ಕಣ್ಣಿನಿಂದ ನೋಡಲು ಅನುಕೂಲಿಸುವಂತೆ "ಟೆಲಿವಿಷನ್" ಎಂಬ ಯಂತ್ರವನ್ನು ನಿರ್ಮಿಸಿ ಅದರ ವಿಶ್ವಪ್ರಚಾರ ಕಾರ್ಯವನ್ನು ಅತಿ ಶೀಘ್ರದಲ್ಲಿಯೇ ಸರ್ವತೋಮುಖವಾಗಿ ಹರಡುವಂತೆ ವ್ಯವಸ್ಥೆ ಮಾಡಿರುವರು. ಹೀಗೆ ಇದು ಯಾರಿಗೆ ತಾನೆ ಹೆಚ್ಚಾಗಿ ಸಂತೋಷವನ್ನುಂಟು ಮಾಡಲಾರದು.

---

# ೩. ಪುಸ್ತಕ ಭಂಡಾರ

ತಿಳುವಳಿಕೆಯ ವಿವಿಧ ವಿಷಯಗಳನ್ನು ಒಳಗೊಂಡಿರುವ ಪುಸ್ತಕಗಳ ಸಮುದಾಯವು "ಪುಸ್ತಕ ಭಂಡಾರ" ವೆನಿಸುವುದು. ಇದು ಪ್ರತಿಯೊಂದು ಮುಖ್ಯನಗರಗಳಲ್ಲೂ ಇದೆ. ಈಚೆಗೆ ಸಣ್ಣಪುಟ್ಟ ಗ್ರಾಮಗಳಲ್ಲೂ ಅಲ್ಲಿಯ ಗ್ರಾಮ ಪಂಚಾಯಿತಿಯ ಕೈಕೆಳಗೆ ಪುಸ್ತಕ ಭಂಡಾರಗಳಿವೆ.

ಸಾಧಾರಣವಾಗಿ ಇದರಲ್ಲಿ ಸಾರ್ವಜನಿಕ ಮತ್ತು ಶಾಲಾಪುಸ್ತಕ ಭಂಡಾರಗಳೆಂಬ ಎರಡು ವಿಧಗಳಿರುವುವು. ಸಾರ್ವಜನಿಕ ಭಂಡಾರಗಳಲ್ಲಿ ಆಯಾ ಸಂಘದ ಸದಸ್ಯರಲ್ಲದೆ ಎಲ್ಲಾ ಜನಗಳೂ ಓದಲು ಅನುಕೂಲಿಸುವ ಏರ್ಪಾಡುಗಳಿವೆ. ಮಾಧ್ಯಮಿಕ ಶಾಲೆ ಮೊದಲುಗೊಂಡು ವಿಶ್ವವಿದ್ಯಾನಿಲಯದ ವರೆಗೆ ಪ್ರತಿಯೊಂದು ವಿದ್ಯಾಮಂದಿರದಲ್ಲಿಯೂ ಭಂಡಾರಗಳಿದ್ದು ಅಲ್ಲಿಯ ವ್ಯಾಸಂಗಶೀಲರಿಗೆಲ್ಲಾ ಮಹದುಪಕಾರ ಮಾಡುತ್ತಿದೆ.

ಕೆಲವು ಪುಸ್ತಕ ಭಂಡಾರಗಳಲ್ಲಿ ಪುಸ್ತಕಗಳ ಜೊತೆಗೆ ಪತ್ರಿಕೆಗಳನ್ನು ಓದಲು ಇಟ್ಟಿರುವರು. ಮತ್ತೆ ಕೆಲವುಗಳಲ್ಲಿ ವಾಚನಾಲಯಗಳನ್ನು ಏರ್ಪಡಿಸಿರುವರು. ಅಂತೂ ಈ ಭಂಡಾರಗಳು ನಾಗರೀಕತೆಯು ಮುಂದುವರಿಯುತ್ತಿರುವ ನವೀನ ಸೌಕರ್ಯಗಳಲ್ಲಿ ಒಂದಾಗಿದೆ. ಅಚ್ಚಿನ ಯುಗಕ್ಕೆ ಮುಂಚೆ ಕೆಲವು ಜನಗಳು ಮಾತ್ರ ಮೀಸಲಾಗಿ ಇಟ್ಟುಕೊಂಡಿದ್ದ ಜ್ಞಾನ ಜ್ಯೋತಿಯು ಇಂದು ಬೇಡಿದವರಿಗೆಲ್ಲಾ ಬೆಳಗಲು ಬಹಳ ಸಹಾಯ ಮಾಡಿವೆ. ಪುಸ್ತಕ ಭಂಡಾರದಲ್ಲಿ ಬಹಳ ಅಮೂಲ್ಯವಾದ ಗ್ರಂಥಗಳಿವೆ. ವಿವಿಧ ಭಾಷೆಗಳಲ್ಲಿ ಸಾಹಿತ್ಯದ ನಾನಾಕ್ಷೇತ್ರಗಳಲ್ಲಿ ಪ್ರತಿಸಮಯಗಳಲ್ಲೂ ನಾನಾವಿಧವಾಗಿ ಅಚ್ಚಾಗುವ ಪುಸ್ತಕಗಳು ಯಾವುದು ಬೇಕಾದರೂ ಈ ಭಂಡಾರಗಳಲ್ಲಿ ಒಂದಿಲ್ಲೊಂದು ಕಡೆ ದೊರಕುತ್ತವೆ. ಎಂತಹ ಐಶ್ವರ್ಯವಂತನಿಗೂ ಹಲವಾರು ಪುಸ್ತಕಗಳನ್ನು ಕೊಂಡು ಕೊಂಡು ಓದಲು ಸಾಧ್ಯವಿಲ್ಲ. ಆದ್ದರಿಂದ ಯಾರಿಗೇ ಆಗಲಿ ಯಾವ ಪುಸ್ತಕಗಳು ಬೇಕಾದರೂ ಈ ಭಂಡಾರಗಳಿಂದ ಪಡೆಯಬಹುದು.

ಗದ್ಯ, ಪದ್ಯ, ನಾಟಕ, ಭೂಗೋಳ, ಇತಿಹಾಸ, ಕಲೆ, ವಿಜ್ಞಾನ ವೇದಶಾಸ್ತ್ರಗಳಾದಿಯಾಗಿ ಯಾವ ವಿಚಾರ ತಿಳಿಯಬೇಕಾದರೂ ದೊಡ್ಡ ದೊಡ್ಡ ಭಂಡಾರಗಳಲ್ಲಿ ದೊರಕುವ ವ್ಯವಸ್ಥೆ ಮಾಡಿರುವರು. ಸಂಶೋಧನೆ ನಡಿಸಲಿಚ್ಛಿಸುವ ವಿದ್ವಾಂಸರಿಗೆ ಇದರಿಂದ ಬಹಳ ಸಹಾಯವಾಗಿದೆ. ವಿದ್ಯಾಭಿಲಾಷೆಯುಳ್ಳ ವಿದ್ಯಾರ್ಥಿಗಳು ತಮ್ಮ ವ್ಯಾಸಂಗಕ್ಕೆ ಸಹಾಯವಾಗುವ ಎಲ್ಲಾ ವಿಚಾರಗಳನ್ನೂ ಇದರ ಸಹಾಯದಿಂದ ತಿಳಿದು ತಮ್ಮ ಜ್ಞಾನ ಭಂಡಾರವನ್ನು ತುಂಬಿಕೊಳ್ಳಬಹುದು.

ಒಳ್ಳೆಯ ಪುಸ್ತಕಗಳು ಸನ್ಮಿತ್ರರಿದ್ದಂತೆಯೇ ಸರಿ. ಇವು ತಿಳುವಳಿಕೆಯ ಮಾರ್ಗದಲ್ಲಿ ಕೇಳಿದುದನ್ನು ಕೊಡುವುದು. ಹೀಗೆ ಪುಸ್ತಕ ಭಂಡಾರಗಳು ಓದಿ ಅಭಿರುಚಿಯನ್ನು ಹೆಚ್ಚಿಸಿ ವಿದ್ಯಾಪ್ರಚಾರದಲ್ಲಿಯೂ ದೇಶೋನ್ನತಿಯಲ್ಲಿಯೂ ಸಹಕರಿಸುವುದು.

---

## ೪. ಸತ್ಯ

"ಸತ್ಯಂ, ಜ್ಞಾನಂ ಅನಂತಂ ಬ್ರಹ್ಮ" ಎಂಬ ಶ್ರುತಿವಾಕ್ಯದಂತೆ ಸತ್ಯವೇ ದೇವರು. ಸತ್ಯವನ್ನು ತಿಳಿದರೆ ದೇವರನ್ನು ತಿಳಿದಂತೆ. ಎಲ್ಲಾ ಗುಣಗಳೂ ಸತ್ಯವನ್ನೇ ಆಶ್ರಯಿಸಿರುವುದರಿಂದ ಸತ್ಯಕ್ಕೆ ಶ್ರೇಷ್ಠತೆ ಹೆಚ್ಚು. ತ್ರಿಕರಣ ಶುದ್ಧಿಯಿಂದಲೂ ಸತ್ಯವಾಗಿರಬೇಕು. ಆಡುವ ಮಾತು ಮನಃಪೂರ್ವಕವಾಗಿದ್ದು ಕಾರ್ಯತಃ ಸತ್ಯಾಂಶವು ತಿಳಿಯುವಂತಿರಬೇಕು. ಅದು ಮತ್ತೊಬ್ಬರಿಗೆ ಪ್ರಿಯವಾಗಿರಬೇಕು. "ಸತ್ಯಂವದ ಧರ್ಮಂ ಚರ" ಎಂಬ ವೇದವಾಕ್ಯಗಳು ಸನಾತನ ಧರ್ಮವನ್ನು ಬೋಧಿಸುತ್ತಿವೆ. ಸತ್ಯದಿಂದಲೇ ಜಗತ್ತು ನಿಂತಿದೆ. ಸತ್ಯಪರಿಪಾಲನೆಯಿಂದಲೇ ಅನೇಕರು ಮಹಾತ್ಮರಾಗಿರುವರು.

ಮಹಾ ಸತ್ಯಸಂಧರಾದ ಹರಿಶ್ಚಂದ್ರ, ನಳ ಮೊದಲಾದ ಚಕ್ರವರ್ತಿಗಳ ಸತ್ಯವನ್ನು ಇಂದಿಗೂ ಕೊಂಡಾಡುತ್ತೇವೆ. ಮಹಾತ್ಮ ಗಾಂಧಿಯವರ ನಡವಳಿಕೆಗಳೂ ಇತ್ತಿರುವ ಸಂದೇಶಗಳೂ ಸತ್ಯ ಮತ್ತು ಅಹಿಂಸೆಗಳಾಗಿವೆ. ಸತ್ಯ ಮಾರ್ಗದಲ್ಲಿ ನಡೆದವರಿಗೆ ಯಾವಾಗಲೂ ಭಯವಿಲ್ಲ. ಸತ್ಯವಿದ್ದ ಕಡೆ ಧರ್ಮವಿರುವುದು. ಧರ್ಮವಿದ್ದಲ್ಲಿ ಜಯಲಭಿಸುವುದು· ಸುಖಸಂತೋಷಗಳು ಸಿಕ್ಕುವುವು. ಸತ್ಯದಿಂದಲ್ಲವೆ ಪಾಂಡವರು ಪ್ರಸಿದ್ಧಿಗೆ ಬಂದುದು.

ಅಸತ್ಯ (ಸುಳ್ಳಾಡುವುದು)ವಿದುವೆಡೆ ಅಧರ್ಮವು ಸಿದ್ಧವು. ಅಲ್ಲಿಯೇ ಅನ್ಯಾಯ, ಅಪರಾಧ, ಆಕ್ರೋಶ ಸರ್ವನಾಶಗಳು, ಇವು ಸಾಲುಸಾಲಾಗಿ ತಲೆದೋರುವುವು. ಅಸತ್ಯದಿಂದಲೇ ಕೌರವರು ಕಾಡುಪಾಲಾದರು. ಅನೃತವನ್ನು ಹೇಳುವವನು ಅರಕಾಸಿಗೂ ಬಾಳನು. ಆನೆಯಂತಹವನೂ ಆಡಿನಂತಾಗುವನು, ಸುಳ್ಳಾಡುವವನು ಮೋಸಗಾರನು. ಅಂಜುಬರುಕನು. ಇವನೊಬ್ಬನಲ್ಲದೆ ಇವನಿಂದ ಇತರರಿಗೂ ಅಪಕಾರವಾಗುವುದು. ಸತ್ಯದೊಂದಿಗೆ ಅಹಿಂಸೆ ಇರುವಂತೆ ಅಸತ್ಯದೊಂದಿಗೆ ಹಿಂಸೆಯೂ ತಾನಾಗಿ ಕಾಣಿಸಿ ಕೊಳ್ಳುವುದು.

ಸತ್ಯವಾದಿಯು ಧೈರ್ಯಶಾಲಿ, ಪರೋಪಕಾರಿ. ಇವನಿಂದ ಲೋಕಕ್ಕೆ ಉಪಕಾರವಾಗುವುದು. ಇವನನ್ನು ಲೋಕವೇ ಮೆಚ್ಚುವುದು.

**“ ಸತ್ಯಮೇವ ಜಯತೇನಾನೃತಂ ”** ಎಂಬಂತೆ ಸತ್ಯವೊಂದೇ ಜಯಿಸುವುದಲ್ಲದೆ ಸುಳ್ಳು ಎಂದಿಗೂ ಜಯಿಸಲಾರದು.

ಒಬ್ಬನು ತನ್ನ ತಾತ್ಕಾಲಿಕ ತೊಂದರೆಯನ್ನು ನಿವಾರಿಸಿಕೊಳ್ಳುವುದಕ್ಕಾಗಲಿ ಯಾವುದಾದರೊಂದು ವಸ್ತು ಲಾಭಕ್ಕಾಗಲಿ ಸುಳ್ಳುಹೇಳುವನು. ಕೆಲವರು ಆತುರಪಟ್ಟಾಗಲೀ, ಯಾವುದೋ ದುರ್ಭಾವನೆಗಳನ್ನಿಟ್ಟುಕೊಂಡಾಗಲೀ, ಅವಿವೇಕದಿಂದಾಗಲೀ ಸುಳ್ಳುಹೇಳುವರು. ಕೆಲವು ಸಂದರ್ಭಗಳಲ್ಲಿ

ಅಜಾಗರೂಕತೆಯಿಂದ ಸುಳ್ಳು ಹೇಳುವುದೂ ಉಂಟು. ಸತ್ಯಸಂಧನಾದ ಧರ್ಮರಾಯನು ನಿಜವನ್ನು ಹೇಳಿದರೂ ಶ್ರೀಕೃಷ್ಣನ ತಂತ್ರದಿಂದ ದ್ರೋಣಾಚಾರ್ಯರು ಸಾವಿಗೆ ತುತ್ತಾದರು. ("ಅಶ್ವತ್ಥಾಮೋ ಹತಃ ಕುಂಜರಃ") ಅಶ್ವತ್ಥಾಮನು ಸತ್ತನು. ಅದು ಆನೆ ಎಂಬ ಸತ್ಯಾಂಶವು. ಶ್ರೀ ಕೃಷ್ಣನು ಮಾಡಿದ ಶಂಖಧ್ವನಿಯಿಂದ ಆನೆ ಎಂಬ ಮಾತು ಕಿವಿಗೆ ಬೀಳದೆ ಅಶ್ವತ್ಥಾಮನು ಸತ್ತನೆಂದು ತಿಳಿದ ದ್ರೋಣರಿಗೆ ಆ ಮಾತು ಶಲ್ಯಪ್ರಾಯವಾಗಿ, ಅವರ ಪ್ರಾಣತ್ಯಾಗಕ್ಕೆ ಕಾರಣವಾಯಿತು. ಹೀಗೆ ಸತ್ಯವನ್ನು ಮರೆಮಾಚುವುದರಿಂದ ಮತ್ತೊಬ್ಬರಿಗೆ ಹಿಂಸೆಯು ಸಿದ್ಧ.

ಕೆಲವರು ನ್ಯಾಯಾಸ್ಥಾನದಲ್ಲಿ ಸುಳ್ಳು ಹೇಳಿ ನಿರಪರಾಧಿಗಳನ್ನು ಅಪರಾಧಿಗಳನ್ನಾಗಿ ಮಾಡಿಸುವರು. ಶಕಾರನು ವಸಂತಸೇನೆಯನ್ನು ಕೊಂದುದಾಗಿ ನ್ಯಾಯಾಸ್ಥಾನದಲ್ಲಿ ಹೇಳಲು ಚಾರುದತ್ತನಿಗೆ ಮರಣದಂಡನೆ ವಿಧಿಸಲ್ಪಟ್ಟುದಾದರೂ, ಬದುಕಿದ್ದ ವಸಂತ ಸೇನೆಗೆ ಈ ಸಂಗತಿಯು ತಿಳಿದು ವಧ್ಯ ಸ್ಥಳಕ್ಕೆ ವೇಗನೆ ಬಂದುದರಿಂದ ಚಾರುದತ್ತನ ಪ್ರಾಣ ಉಳಿಯಿತು. ಹೀಗೆಯೇ ಅನೇಕರ ಅಸತ್ಯ ವಚನಗಳಿಂದ ತಮ್ಮ ಆಸ್ತಿ ಪಾಸ್ತಿಗಳನ್ನು ಕಳೆದುಕೊಂಡು ನಿರ್ಗತಿಕರಾಗಿರುವುದಕ್ಕೆ ಹಲವಾರು ನಿದರ್ಶನಗಳಿವೆ. ನವೀನ ಕಾಲದಲ್ಲಿ ಸುಳ್ಳು ಹೇಳಿ ಹಗಲು ದರೋಡೆಮಾಡುವರು ಬಹು ಮಂದಿ ಹೆಚ್ಚಿಹೋಗಿರುವರು. **"ಸತ್ಯಂ ಬ್ರೂಯಾತ್ ಪ್ರಿಯ ಬ್ರೂಯಾತ್ ನ ಬ್ರೂಯತ್ ಸತ್ಯಮ ಪ್ರಿಯಂ"** ಎಂಬಂತೆ ಅಪ್ರಿಯವಾದ ಸತ್ಯವನ್ನು ಹೇಳಬಾರದು. ಶತ್ರು ಭಯದಿಂದ ಒಬ್ಬನು ಮರೆಹೊಕ್ಕ ಸಂದರ್ಭದಲ್ಲಿ ಶರಣಾಗತನನ್ನು ಬದುಕಿಸಲು ಸುಳ್ಳಾಡಬಹುದು. ಇದು ಧರ್ಮವಿರುದ್ಧವಲ್ಲ. ಹಾಗೆಯೇ ಮಕ್ಕಳ ವಿಷಯದಲ್ಲೂ ರೋಗಿಗಳ ವಿಷಯದಲ್ಲೂ ಅವರಹಿತಕ್ಕಾಗಿ ಹೇಳುವ ಸುಳ್ಳುಮಾತುಗಳು ಅಸತ್ಯವಾಗಲಾರದು.

ಮಹಾರಾಜರು **"ಸತ್ಯನೋಽವ್ರೊದ್ಧರಾಮ್ಯ ಹಂ"** ಎಂದು ಸಾರಿ ಸತ್ಯವನ್ನು ತಾವು ಉದ್ಧರಿಸುತ್ತೇವೆಂದು ಪ್ರಜೆಗಳಿಗೆ ಅಭಯವಿತ್ತಿರುವರು ಕೆಲವು ವ್ಯಾಪಾರಿಗಳು ಧರ್ಮಸಮಾಜದ ಕಟ್ಟಳೆಯಂತೆ ಸತ್ಯಮಾರ್ಗದಲ್ಲಿ

ವ್ಯಾಪಾರವನ್ನು ಮಾಡಿ ಅಲ್ಪಲಾಭವನ್ನಿಟ್ಟು ವಿಶೇಷ ಲಾಭವನ್ನು ಪಡೆಯುವರು. ಸತ್ಯಸಂಧರು ತಮಗೆ ಎಂತಹ ಕಷ್ಟ ಬಂದರೂ ನ್ಯಾಯಮಾರ್ಗವನ್ನು ಬಿಟ್ಟು ಬಿಡದೆ ಕೀರ್ತಿಶಾಲಿಗಳಾಗಿರುವರು. ಅನ್ಯಾಯ ಮಾರ್ಗದಿಂದ ಸಂಪಾದಿಸಿದುದೆಲ್ಲವೂ ಅಪಥ್ಯಾಳವಾಗುತ್ತದೆ. ಸತ್ಯ ಮಾರ್ಗದಿಂದ ನಡೆಯುವ ಪ್ರತಿಯೊಂದು ಕೆಲಸವೂ ಇಹಪರ ಸೌಖ್ಯವನ್ನು ಕೊಡುತ್ತವೆ. ಚಿಕ್ಕತನದಿಂದಲೂ ಸತ್ಯವನ್ನು ಸಾಧಿಸುವರು ಮುಂದೆ ಸುಖಪುರುಷರಾಗುವರು. ಆದುದರಿಂದ ಪ್ರತಿಯೊಬ್ಬರೂ ಸತ್ಯ ಮಾರ್ಗದಲ್ಲಿ ನಡೆದು ಸತ್ಯಸ್ವರೂಪನಾದ ಭಗವಂತನ ಕೃಪೆಗೆ ಪಾತ್ರರಾಗಬೇಕಾಗಿದೆ. ಸತ್ಯವೇ ಭುವನ ಭವನಕ್ಕೆ ತಳಹದಿ ಎಂದರೆ ತಪ್ಪಾಗಲಾರದು.

ಈ ಕಾರಣದಿಂದಲೇ ಮಹಾತ್ಮ ಗಾಂಧೀಜಿಯವರು ಎಲ್ಲರಿಗೂ ಅಹಿಂಸೆ, ಸತ್ಯಗಳ ಹಾದಿ ಹಿಡಿಯಬೇಕೆಂದು ಸಾರಿರುವುದು. ಮಹಾತ್ಮರ ಆತ್ಮಕ್ಕೆ ಶಾಂತಿಯುಂಟಾಗುವಂತೆ ನಾವು ಸತ್ಯ ಮಾರ್ಗದಲ್ಲಿ ನಡೆಯೋಣ.

---

## ೫. ನನ್ನ ಜೀವನಾದರ್ಶ

ಜೀವನದಲ್ಲಿ ಆದರ್ಶ ಸಾಧನೆಯು ಸುಲಭಸಾಧ್ಯವಲ್ಲ. ಮನುಷ್ಯರಿಗೆ ಬಾಲ್ಯದಿಂದಲೂ ಅನೇಕ ವಿಧವಾದ ಆಲೋಚನೆಗಳು ತಲೆದೋರುತ್ತವೆ. ವಿವೇಕಯುಕ್ತವಾದ ದೃಢಸಂಕಲ್ಪವು ಇವನ ಮುಂದಿನ ಅಡಿಗಲ್ಲಾಗಿರುವುದು.

ವಿದ್ಯಾರ್ಥಿಗಳಿಗೆ ಪ್ರೌಢಶಾಲೆಯ ವಿದ್ಯಾಭ್ಯಾಸವು ಪೂರೈಸಿದ ಕೂಡಲೇ ಮುಂದಿನ ಗುರಿಯ ವಿಷಯವಲ್ಲಿ ಗಮನವಿರಬೇಕು. ಆದರ್ಶವಿಲ್ಲದವನ ಬಾಳು ನಿರರ್ಥಕವಾಗುವುದು. ಕೆಲವು ಸಮಯಗಳಲ್ಲಿ ಇವರ

ಸಾಧನೆಗೆ ಬಹಳ ಆತಂಕಗಳು ಬರುವುದಾದರೂ ಪುರುಷ ಪ್ರಯತ್ನದಲ್ಲಿ ಅಸಾಧ್ಯವಾದದು ಯಾವುದೂ ಇಲ್ಲ. ವಿಶ್ವವಿದ್ಯಾನಿಲಯ ವ್ಯಾಸಂಗಕ್ಕೆ ಪ್ರೋತ್ಸಾಹಕರ ಸಹಾಯವು ಕಡಿಮೆಯಾಗಿದ್ದರೂ ಎಷ್ಟು ಜನ ತಮ್ಮ ಆತ್ಮಾವಲಂಬನದಿಂದ ವಿದ್ಯಾಭ್ಯಾಸದ ಕೊನೆಯನ್ನು ಮುಟ್ಟಿಲ್ಲ. ಒಂದು ವೇಳೆ ಅಂತಹ ಪ್ರಯತ್ನಗಳು ನಿರರ್ಥಕವಾದರೆ ಯಾವುದಾದರೊಂದು ಕೆಲಸಕ್ಕೆ ಪ್ರಯತ್ನ ಮಾಡಬೇಕು. ಈ ವಿಧವಾದುದನ್ನೇ ಆದರ್ಶ ಕಲ್ಪನೆ ಎನ್ನುವುದು.

ಇನ್ನು ನನ್ನ ಮಾತು. ನನಗೆ ಗುಮಾಸ್ತೆ ಕೆಲಸವೆಂದರೆ ಆಗದು. ವಕೀಲ ವೃತ್ತಿಯು ಸ್ವತಂತ್ರವಾದರೂ ಗಾಳಿಗಂಟಲು ವ್ಯಾಜ್ಯಗಳಲ್ಲಿ ತಲೆ ಕೆಡಿಸಿಕೊಂಡು ನ್ಯಾಯಾನ್ಯಾಯಗಳನ್ನು ಅದಲು ಬದಲು ಮಾಡಲು ಮನ ಒಪ್ಪುವುದಿಲ್ಲ. ವ್ಯಾಪಾರಾದಿ ಉದ್ಯಮಗಳಿಗೆ ಕೈಹಾಕೋಣವೆಂದರೆ ಬಂಡವಾಳವೆಲ್ಲಿಂದ ಬರಬೇಕು? ಹೋಗಲಿ ಉಪಾಧ್ಯಾಯರ ಕೆಲಸಕ್ಕೆ ಸೇರೋಣವೆಂದರೆ ಈ ವೃತ್ತಿಗೆ ಬೇಕಾದ ಜ್ಞಾನರಾಶಿಯಾಗಲಿ, ಸಹನಾದಿ ಸದ್ಗುಣಗಳಾಗಲಿ ನನ್ನಲ್ಲಿ ಅಪರೂಪ. ಹಾಗೂ ಒರಟು ಧೈರ್ಯಮಾಡಿದರೆ ಉಪಾಧ್ಯಾಯ ವೃತ್ತಿಗೆ ತಕ್ಕ ಸಂಬಳ ಕೊಡುವವರೇ ಇಲ್ಲ.

ಕೊನೆಯ ಉಪಾಯವೆಂದರೆ ನಮ್ಮ ತಂದೆಯಂತೆ ನಾನೂ ವೈದ್ಯ ವೃತ್ತಿಯನ್ನು ಹಿಡಿಯಬೇಕೆಂದಿರುವೆನು. ಆದರೆ ಅವರಂತೆ ಬರೀ ಆಯುರ್ವೇದ ಪಂಡಿತನಾದರೆ ಜೀವನ ನಡೆಸುವುದೇ ಕಷ್ಟವಾಗುತ್ತದೆ. ಆಂಗ್ಲ ರೀತಿಯ ವೈದ್ಯ ವಿದ್ಯೆಯನ್ನು ಕಲಿಯೋಣವೆಂದರೆ ಭಾರಿ ಖರ್ಚು. ಆದರೆ ಆಯುರ್ವೇದ ವಿದ್ಯೆಯನ್ನೇ ಹೊಸಮಾರ್ಗದಿಂದ ಮೈಸೂರಿನ ಆಯುರ್ವೇದ ಕಾಲೇಜಿನಲ್ಲಿ ಹೇಳಿಕೊಡುವ ವ್ಯವಸ್ಥೆ ಮಾಡಿದ್ದಾರೆಂದು ಕೇಳಿದೆನು. ಆದುದರಿಂದ ಅಲ್ಲಿ ನಾಲ್ಕು ವರ್ಷದ ವ್ಯಾಸಂಗ ಮಾಡುತ್ತಾ ಕೊಡುವ ವಿದ್ಯಾರ್ಥಿ ವೇತನದಿಂದ ಜೀವನ ಸಾಗಿಸಿ ಆಯುರ್ವೇದ ವೈದ್ಯದಲ್ಲಿ ಪ್ರಾವೀಣ್ಯತೆಯನ್ನು ಪಡೆಯಬೇಕೆಂದಿರುವೆನು. ನಾಡ ವೈದ್ಯವನ್ನು ಒಂದು ನವೀನ

ಕ್ರಮದಿಂದ ಬಳಕೆಗೆ ತರುವುದರಿಂದ ನಮ್ಮ ಜನಗಳಲ್ಲಿ ನಂಬಿಕೆ ಹುಟ್ಟಿಸ ಬಹುದೆಂಬುದನ್ನು ಅನಂತರ ತೋರಿಸಿಕೊಡಬೇಕೆಂದಿರುವೆನು.

ಇನ್ನು ಪರೀಕ್ಷೆಯಲ್ಲಿ ಉತ್ತೀರ್ಣನಾದ ಮೇಲೆ ಕೆಲಸ ಹುಡುಕಿಕೊಂಡು ಹೋಗುವುದರಲ್ಲಿ ಮನಸ್ಸಿಲ್ಲ. ಆ ವೇಳೆಗೆ ಸ್ವಂತ ಔಷದಾಲಯವನ್ನು ತೆಗೆಯಬೇಕೆಂದಿರುವೆನು. ಇಷ್ಟಕ್ಕೂ ಇದೇನು ತಿರುಕನ ಕನಸಾಗುವುದೋ ಅಥವಾ ನಿಜವಾಗುವುದೋ ನೋಡಬೇಕು.

ಕೊನೆಯ ಒಂದಂಶವನ್ನು ಹೇಳಬೇಕಾದರೆ ಮನುಷ್ಯನಿಗೆ ಇಹಪರ ಸೌಖ್ಯಗಳೆರಡೂ ಜೀವನಾದರ್ಶವಾಗಿರಬೇಕು. ಅದಕ್ಕಾಗಿ ನನ್ನ ಸ್ಥಿತಿ ಉತ್ತಮವಾದೊಡನೆಯೇ ಪರೋಪಕಾರಕ್ಕೆ ಗಮನ ಕೊಡಬೇಕೆಂದಿರವೆನು. "ಜನಸೇವೆಯೇ ಜನಾರ್ದನನ ಸೇವೆ" ಎಂಬುದೇ ನನ್ನ ಜೀವನಾದರ್ಶ.

---

# ಮಿಶ್ರ ಪ್ರಬಂಧದ ರೂಪುರೇಷೆಗಳು.

## ೧. ಪ್ರಾಣಿ ದಯೆ.

ಪವಿತ್ರ ಕರ್ತವ್ಯ—ಪ್ರಾಣಿಗಳ ಉಪಯೋಗ--ಹಾನಿಯಿಂದಾಗುವ ಅನರ್ಥ—ಕ್ರೌರ್ಯ, ಪಾಪ ಸಂಘಟನೆ—ಕಟುಕರು ಮತ್ತು ತಿಳಿಗೇಡಿಗಳು ಮಾಡುತ್ತಿರುವ ಕೆಲಸ—ಪ್ರಾಣಿದಯಾಪ್ರಚಾರ—ದಯೆಯ ಮಹತ್ವ.

## ೨. ಸ್ಥಿರ ಪ್ರಯತ್ನ.

ಅರ್ಥ ವಿವರಣೆ--ಆವಶ್ಯಕತೆ--ಬೇಕಾದ ಶಕ್ತಿ, ಕಾಲ, ಸಹಾಯಗಳು- ನಿಷ್ಫಲತೆಗೆ ಕಾರಣ ಮತ್ತು ನಿವಾರಣಾಕ್ರಮ--ನಿದರ್ಶನಗಳು—ವಿಶ್ವಾಮಿತ್ರ,

ಧೃವ, ಸಾವಿತ್ರಿ, ರಾಬ್ರೂಸ್, ಆಂಜನೇಯಾದಿಗಳು. ನವೀನ ವೈಜ್ಞಾನಿಕರ ಸಾಹಸ—ಪ್ರಯತ್ನದಿಂದಾಗುವ ಸೌಖ್ಯ.— ಮುಕ್ತಾಯ.

## ೩. ಆರೋಗ್ಯ ಸಂಪಾದನೆ.

1) ಆರೋಗ್ಯವೇ ಭಾಗ್ಯ—ಅರ್ಥವಿವರಣೆ.

2) ಆರೋಗ್ಯವಾಗಿರುವ ರೀತಿ.

3) ಅನಾರೋಗ್ಯದಿಂದಾಗುವ ಹಾನಿ.

4) ಐಶ್ವರ್ಯ, ಬಡತನ ಆರೋಗ್ಯಗಳ ಪರಸ್ಪರ ಸಂಬಂಧ.

5) ಖಾಯಿಲೆ ಬರಲು ಕಾರಣ—ಬಾಲ್ಯದ ಅಭ್ಯಾಸಗಳು,

6) ಅಂಗಸಾಧನೆ, ಮಿತಾಹಾರ, ಒಳ್ಳೆಯ ಗಾಳಿ, ನೈರ್ಮಲ್ಯ, ಇವುಗಳ ಆವಶ್ಯಕತೆ.

7) ಪ್ರಯೋಜನಗಳು. ಆರೋಗ್ಯಕ್ಕೆ ಸಮನಾದ ಭಾಗ್ಯವಿಲ್ಲ.

## ೪. ದೈವ ಭಕ್ತಿ.

ಪೀಠಿಕೆ—ಋಣತ್ರಯಗಳಲ್ಲಿ ಆದ್ಯಕರ್ತವ್ಯ ಆಸ್ತಿಕತೆ ಮತ್ತು ನಂಬಿಕೆ—ಹುಟ್ಟು-ಸಾವು, ಕಷ್ಟಸುಖಗಳಲ್ಲಿ ದೇವರು ತೋರುವ ಕರುಣೆ ಮಮತೆ—ನಿದರ್ಶನಗಳು. ಭಕ್ತಿಯ ವೈವಿಧ್ಯ:—ಇಷ್ಟ ದೇವತಾಸ್ಮರಣೆ—ಪ್ರಾರ್ಥನೆ ಪ್ರಾಣಿದಯೆ—ಪರೋಪಕಾರ ಜ್ಞಾನಾರ್ಜನೆ— ದೇವರ ಸಮಸ್ತ ಸಂದೇಶ ಪಾಲನೆ. (ವಿಶ್ವಮೈತ್ರಿ, ಸಹೋದರ ಪ್ರೇಮ ಇತ್ಯಾದಿ)

## ೫. ವಿದ್ಯಾಭ್ಯಾಸ.

1) ಪೀಠಿಕೆ—ಅಗತ್ಯತೆ

2) ವಿದ್ಯಾಭ್ಯಾಸ ವಿಧಾನಗಳು-- ಅಭ್ಯಾಸ ರೀತಿ—ಕಾಲ-ವಯಸ್ಸು ವಿವಿಧ ಭಾಗಗಳ ಅನುಕೂಲ್ಯ, ಪ್ರಾತಿಕೂಲ್ಯಗಳು.

3) ಧ್ಯೇಯಸಾಧನೆ--ಸ್ವಾವಲಂಬನಶಕ್ತಿ ಜೀವನ ಮತ್ತು ನೈತಿಕ ಮಾರ್ಗ.
4) ಅವಿದ್ಯಾವಂತನಿಗೂ ವಿದ್ಯಾವಂತನಿಗೂ ಇರುವ ವ್ಯತ್ಯಾಸ ವಿದ್ಯೆಯ ಮಹತ್ವ.
5) ಸಮಾಪ್ತಿ—ಪ್ರಯೋಜನ—ಇಹಪರ ಸೌಖ್ಯ.

## ೬. ಅಂಗಸಾಧನೆ.

1) ಉಪಕ್ರಮ—ಆವಶ್ಯಕತೆ.
2) ಅಂಗಸಾಧನೆಯ ವಿಧಗಳು—ವ್ಯಾಯಾಮ, ವಿವಿಧ ಪಂದ್ಯಕ್ರೀಡೆ (ಹಿಂದಿನ ಮತ್ತು ಈಗಿನವು) ಓಡುವುದು, ಈಜುವುದು ಕುದುರೆ ಸವಾರಿ ಇತ್ಯಾದಿ
3) ಕಾಲ-ನಿಯಮಗಳು—ವಯಸ್ಸಿಗೆ ತಕ್ಕ ವ್ಯಾಯಾಮ.
4) ಪ್ರಯೋಜನ--ಆರೋಗ್ಯ ಸಂಪಾದನೆ--ಶರೀರ ಸೌಷ್ಟವ, ಸೌಂದರ್ಯ, ಸಂತೋಷಪ್ರಾಪ್ತಿ.

## ೭. ವಾಚನಾಲಯಗಳು.

1) ಉಪಕ್ರಮ—ಇರುವ ಸ್ಥಳ—ನಡೆಸುವವರು.
2) ಬರುವ ಪತ್ರಿಕೆಗಳು—ದಿನ, ವಾರ, ಪಕ್ಷ, ಮಾಸಪತ್ರಿಕೆಗಳು—ನಿದರ್ಶನಗಳು—ವಿವಿಧ ಭಾಷಾ ಪತ್ರಿಕೆಗಳು.
3) ಓದುವ ವ್ಯವಸ್ಥೆ—ಬರುವ ಜನಗಳು—ಬೇಕಾದ ವ್ಯವಸ್ಥೆ.
4) ಪ್ರಯೋಜನ—ಪ್ರಪಂಚಜ್ಞಾನ, ಹರ್ಷ—ಉಪಸಂಹಾರ (ಎಲ್ಲಾ ಸ್ಥಳಗಳಲ್ಲೂ ಇದರ ಆವಶ್ಯಕತೆ)

## ೮. ವೃತ್ತಾಂತ ಪತ್ರಿಕೆಗಳು.

1) ಉಪಕ್ರಮ—ಮಹತ್ವ—ಅಗತ್ಯತೆ.

2) ದಿನ, ವಾರ, ಪಕ್ಷ, ಮಾಸ ಪತ್ರಿಕೆಗಳು. ತ್ರೈಮಾಸಿಕ—ಷಣ್ಮಾಸಿಕ—ವಾರ್ಷಿಕ ಸಂಚಿಕೆಗಳು.
3) ಭಿನ್ನ ವಿಷಯಗಳು—ಪ್ರಪಂಚದ ಸ್ಥಿತಿಗತಿಗಳು—ಜನರ ಗೋಳು ರಾಜಕೀಯ ಸಾಮಾಜಿಕ ವಿಚಾರಗಳು—ಪ್ರಕಟಣೆ—ವಿನೋದ ವಿಷಯ—ಕಥೆ, ಕವಿತೆ—ವಿಜ್ಞಾನ—ಎಲ್ಲಾ ಬಗೆಯ ಸಾಹಿತ್ಯ.
4) ಪ್ರಕಟಿಸುವ ವಿಧಾನ—ದೊಡ್ಡ ಪತ್ರಿಕೆಗಳ ಅಸಾಧಾರಣ ಕ್ರಮ ಹಂಚಿಕೆಯ ವ್ಯವಸ್ಥೆ.
5) ಉಪಕಾರ—ಪ್ರಜಾ—ಸರ್ಕಾರಗಳ ಮಧುರ ಬಾಂಧವ್ಯದ ವ್ಯವಸ್ಥೆ — ಸಂತೋಷಪ್ರಾಪ್ತಿ — ವ್ಯಾಪಾರ, ವ್ಯವಹಾರಾಭಿವೃದ್ಧಿ, ಇತರ ಸೌಕರ್ಯಗಳು—ಪ್ರಚಾರಕಾರ್ಯ
6) ನಿಗಮನ—ಬೇಕಾದ ಪ್ರೋತ್ಸಾಹ.

## ೯. ದೇಶ ಸಂಚಾರ.

1) ಉಪಕ್ರಮ—ಪ್ರಾಮುಖ್ಯತೆ
2) ಉದ್ದೇಶಗಳು—ನೋಟ, ವಿದ್ಯಾರ್ಜನೆ, ಕೈಗಾರಿಕೆ, ಕುಶಲ ವಿದ್ಯೆಗಳ ಅನುಭವ, ತೀರ್ಥಯಾತ್ರಾದಿಗಳು, ವಿವಿಧ ಉತ್ಸವಗಳೇ ಮೊದಲಾದುವು.
3) ನಿದರ್ಶನಗಳು—ಟರ್ಕಿ ಜಪಾನ್ ದೇಶದವರ ಸಾಹಸಗಳು.
4) ಸಹಾಯ ಮತ್ತು ಇತರ ಅನುಕೂಲ್ಯಗಳು
5) ಪ್ರಯೋಜನಗಳು-ಸಂತೋಷಲಾಭ, ಲೋಕಾನುಭವ, ಜ್ಞಾನಾರ್ಜನೆ, ಉತ್ತಮ ನಡವಳಿಕೆ, ಆರ್ಥಿಕ ಸೌಕರ್ಯ.
6) ನಿಗಮನ—ವಿದ್ಯಾರ್ಥಿಗಳ ಕರ್ತವ್ಯಕಾರ್ಯ.

## ೧೦. ವಸ್ತು ಪ್ರದರ್ಶನ ಶಾಲೆ.

1) ಅರ್ಥವಿವರಣೆ.

2) ಉದ್ದೇಶಗಳು—ಕೈಗಾರಿಕೆ ಕುಶಲವಿದ್ಯೆಗೆ ಪ್ರೋತ್ಸಾಹ.
3) ವಿಭೇದಗಳು—ತಾತ್ಕಾಲಿಕ—ದಸರಾ ಮತ್ತು ಕ್ರಿಸ್ಮಸ್ ಪ್ರದರ್ಶನಗಳು
4) ಪ್ರದರ್ಶನದ ವಿಭಾಗಗಳು—ವ್ಯವಸಾಯ, ಕೈಗಾರಿಕೆ, ವಿದ್ಯಾಭ್ಯಾಸ, ಆರೋಗ್ಯ, ವಿನೋದ ವಸ್ತುಗಳಿಗೆ ಸಂಬಂಧಿಸಿದ ವಸ್ತುಪ್ರದರ್ಶನಗಳು.
5) ಪ್ರಯೋಜನ—ವ್ಯಾಪಾರಾಭಿವೃದ್ಧಿ ಪ್ರೋತ್ಸಾಹ, ಜನಗಳ ತಿಳುವಳಿಕೆ ವಿನೋದ ಸುಖಸಂತೋಷಗಳು.

ನಿಗಮನ—ಪ್ರತಿಯೊಂದು ಮುಖ್ಯ ನಗರದಲ್ಲೂ ಪ್ರದರ್ಶನದ ಅಗತ್ಯತೆ, ಜನಗಳು ಕೊಡಬೇಕಾದ ಪ್ರೋತ್ಸಾಹ.

## ೧೧. ಹಳ್ಳಿಯ ಅಭಿವೃದ್ಧಿಯಿಂದ ದೇಶಾಭಿವೃದ್ಧಿ.

ಪೀಠಿಕೆ—ಹಳ್ಳಿಗಳ ಸ್ಥಿತಿ—ಪಟ್ಟಣಗಳ ಜೀವನಾಡಿ, ಏಳಿಗೆಯ ಮಾರ್ಗಗಳು—ಗ್ರಾಮಸ್ವಚ್ಛತೆ, ವಿದ್ಯಾಪ್ರಚಾರ—ನೀರುದೀಪಗಳ ವ್ಯವಸ್ಥೆ ಔಷಧಿಯ ಸೌಕರ್ಯ, ಐಕಮತ್ಯ—ವ್ಯವಸಾಯಾಭಿವೃದ್ಧಿ, ಹಳ್ಳಿಯಿಂದಾಗುತ್ತಿರುವ ಉಪಕಾರಗಳು—ಪಟ್ಟಣಗಳಿಗೆ ಹಾಲು ಮೊಸರು, ದವಸಧಾನ್ಯ ಹುಲ್ಲು ಸೌದೆಗಳನ್ನು ಒದಗಿಸುವುದು.—ದೇಶಾಭಿವೃದ್ಧಿಯ ಮಾರ್ಗಗಳು—ನಿಗಮನ—ಹಳ್ಳಿಗಳು ಪಟ್ಟಣಗಳ ಜೀವನಾಡಿ—ಅವುಗಳ ಅಭಿವೃದ್ಧಿಯ ಆವಶ್ಯಕತೆ.

## ೧೨. ಕೈಗಾರಿಕೆಯು ದೇಶೋನ್ನತಿಗೆ ಕಾರಣ.

ಉಪಕ್ರಮ—ದೇಶೋನ್ನತಿಯಲ್ಲಿ ಕೈಗಾರಿಕೆಯ ಪಾತ್ರ—ಕೈಗಾರಿಕೆ ಮತ್ತು ಅದರ ವಸ್ತುಗಳು.

1) ವಿವಿಧ ಕೈಗಾರಿಕೆಗಳು—ಆಹಾರ, ಉಡುಪು, ಪದಾರ್ಥ ಮತ್ತು ಯಂತ್ರಗಳಿಗೆ ಸಂಬಂಧಪಟ್ಟವು.

2) ವಸ್ತುಗಳು—ಧಾನ್ಯ, ಬಟ್ಟೆ, ಉಪಕರಣ, ವಾಹನ, ವಿವಿಧ ಯಂತ್ರಗಳು. ನಿದರ್ಶನ—ಭಾರತದಲ್ಲಿ ಕೈಗಾರಿಕೆಯ ವಸ್ತುಗಳನ್ನು ಪರ ದೇಶದಿಂದ ತರಿಸುತ್ತಿರುವುದು—ಈ ದೇಶದಲ್ಲಿ ಕೈಗಾರಿಕೆಗಳ ಸ್ಥಾಪನೆ. ಪ್ರಯೋಜನ—ಜೀವನಸೌಕರ್ಯ—ನಮ್ಮ ಹಣದ ಉಳಿತಾಯ ನಾಗರಿಕತೆಯ ಬೇಡಿಕೆಗಳ ಪೂರ್ಣತೆ. ಉಪಸಂಹಾರ—ಕೈಗಾರಿಕೆಯು ದೇಶೋನ್ನತಿಗೆ ಕಾರಣ.

## ೧೩. ವಿಜ್ಞಾನದ ಅನುಕೂಲ ಪ್ರತಿಕೂಲಗಳು.

ಪೀಠಿಕೆ—"ವಿಜ್ಞಾನ"ದ ಅರ್ಥವಿವರಣೆ—ಪಾರಮಾರ್ಥಿಕ, ರಸಾಯನ, ಭೌತಾದಿಶಾಸ್ತ್ರಗಳು

**ವಿಜ್ಞಾನದ ಅನುಕೂಲಗಳು :—**

ಜೀವನ ಸೌಕರ್ಯ, ಕೈಗಾರಿಕೆ; ವ್ಯವಸಾಯ, ಗೃಹೋಪಕರಣ, ವಿವಿಧ ವಾಹನಾದಿ ಸೌಕರ್ಯಗಳು.

**ವಿಜ್ಞಾನದ ಪ್ರತಿಕೂಲಗಳು :—**

ಭಯೋತ್ಪಾದಕವಸ್ತು (ಸಿಡಿಮದ್ದು, ವಿಷವಾಯು, ಆಟಂಬಾಂಬು ಗಳವರೆಗೆ) ಗಳ ನಿರ್ಮಾಣ ಮತ್ತು ಇವುಗಳಿಂದಾಗುವ ಹಾನಿಗಳು. ಮುಕ್ತಾಯ—ಪ್ರಯೋಜನಕ್ಕಿಂತ ಹಾನಿಯೇ ಹೆಚ್ಚು ಅನುಕೂಲ್ಯ ಕಲ್ಪನೆಯ ಆವಶ್ಯಕತೆ.

## ೧೪. ಕನ್ನಡ ನಾಡುಹಬ್ಬಗಳು.

ಉಪಕ್ರಮ—ವಿವಿಧ ಹಬ್ಬಗಳು—ನವರಾತ್ರಿ, ಯುಗಾದಿ, ದೀಪಾವಳಿ, ಸಂಕ್ರಾಂತಿ, ಇತ್ಯಾದಿ ಹಬ್ಬಗಳನ್ನು ಮಾಡುವ ಉದ್ದೇಶ—ಭಕ್ತಿಪ್ರಕಾಶ ಕರ್ಮಶ್ರದ್ಧೆ ಪುರುಷಾರ್ಥಸಾಧನೆ—ರಾಜಭಕ್ತಿ—ಜನಸೇವೆ—ಸಂತೋಷಾತಿಶಯ—ವಿಶ್ರಾಂತಿಯ ಸದುಪಯೋಗ, ಹಬ್ಬಗಳಲ್ಲಿ ಜನರ ನಡೆವಳಿಕೆ, ದುಂದುಖರ್ಚು, ರೋಗರುಜಿನಗಳು — ಆಡಂಬರಕಾರ್ಯಗಳ ತ್ಯಾಗ,

ವ್ಯಯ ಪರೋಪಕಾರದಲ್ಲಿ ಆಸಕ್ತಿ. ಉಪಸಂಹಾರ—ಕನ್ನಡಿಗರ ಮೇಲ್ಮೆಗೆ ನಾಡುಹಬ್ಬಗಳ ಆಚರಣೆಯಲ್ಲಿ ಕೆಲವು ಮಾರ್ಪಾಡುಗಳ ಆವಶ್ಯಕತೆ.

## ೧೫. ಕರ್ಣಾಟಕದ ಅಭಿವೃದ್ಧಿಗೆ ಮಾಡಬೇಕಾದ ಕಾರ್ಯಗಳು.

## (ಕರ್ತವ್ಯಗಳು.)

ಪೀಠಿಕೆ—ಕನ್ನಡನಾಡಿನ ವ್ಯಾಪ್ತಿ—ನಾಡಿನ ಪರಿಸ್ಥಿತಿ—ಏಳಿಗೆಯು ಆವಶ್ಯಕತೆ. ಅಭಿವೃದ್ಧಿ ಮಾರ್ಗಗಳು—ಭಾಷಾಸೇವೆ, ಕೃಷಿ—ಕೈಗಾರಿಕೆ, ವ್ಯಾಪಾರೋದ್ಯಮಗಳಲ್ಲಿ ಕನ್ನಡಿಗರ ಮುನ್ನಡೆ—ಪ್ರಾಂತ ಏಕೀಕರಣ—ಐಕಮತ್ಯ—ಸಹೋದರ ಪ್ರೇಮ—ಮುಕ್ತಾಯ — ಮೇಲ್ಕಂಡ ವಿಚಾರದಲ್ಲಿ ಪ್ರತಿಯೊಬ್ಬ ಕನ್ನಡಿಗನ ಸೇವೆ—ಮಂಗಳ ಭವಿಷ್ಯಸಾಧನೆ.

## ೧೬. ಅಕ್ಷರ ಪ್ರಚಾರವು ದೇಶದ ಏಳಿಗೆಗೆ ತಳಹದಿ.

ಅರ್ಥವಿವರಣೆ, ಕ್ರಮವಾದ ವಿದ್ಯಾಭ್ಯಾಸಕ್ಕೂ, ಅಕ್ಷರ ಪ್ರಚಾರಕ್ಕೂ ಇರುವ ವ್ಯತ್ಯಾಸ—ನಮ್ಮ ದೇಶದ ಅನಕ್ಷರಸ್ಥರು—ಅಜ್ಞಾನದಿಂದಾಗುವ ಅನರ್ಥಗಳು—ಅಕ್ಷರ ಜ್ಞಾನದಿಂದಾಗುವ ಸೌಕರ್ಯಗಳು—ಅನಕ್ಷರಸ್ಥರಿಗೆ ಅಕ್ಷರ ಪ್ರಚಾರದ ಆವಶ್ಯಕತೆ—ಪ್ರಚಾರಕಾರ್ಯ—ಪ್ರಚಾರ ಸಮಿತಿಯವರ ವಿದ್ಯಾವಂತರ ಸೇವೆ, ಯುವಕರ ಬೆಂಬಲ—ಅಕ್ಷರ ಪ್ರಚಾರ ಸ್ಥಳ—ಕಾಲ—ಅವಧಿ— ಖರ್ಚು ಸೌಕರ್ಯಗಳು ಪ್ರಯೋಜನ— ಅಕ್ಷರ ಪ್ರಚಾರದಿಂದ ದೇಶದ ಜನಗಳ ಮೌಢ್ಯನಿವಾರಣೆ—ಸ್ವತಂತ್ರ ಜೀವನ—ಸುಖಸಂತೋಷ ಸನ್ಮಾರ್ಗಪ್ರವರ್ತನ—ನಿಗಮನ—ನಮ್ಮ ವಿದ್ಯಾವಂತ ಯುವಕರ ನೆರವು—ಜನಗಳ ಕರ್ತವ್ಯ—ಲೋಕಕ್ಷೇಮ.

---

## ಅಭ್ಯಾಸಗಳು

ಇವುಗಳಲ್ಲಿ ಪ್ರತಿಯೊಂದರ ವಿಚಾರವಾಗಿಯೂ ಒಂದೊಂದು ಪ್ರಬಂಧವನ್ನು ಬರೆಯಿರಿ :—

### ೧. ವರ್ಣನಪರ.

1) ನನ್ನ ಮನೆ. ನನ್ನ ಹಳ್ಳಿ 2) ನನ್ನ ಗಡಿಯಾರ, ನನ್ನ ಮೋಟರು
3) ಆಕಾಶವಾಣಿ 4) ನವೀನ ಶೋಧನೆಗಳು.
5) ಚಲನ ಚಿತ್ರಗಳು 6) ಮಳೆಗಾಲ—ಬೇಸಿಗೆಯ ದಿನಗಳು
7) ಹಳ್ಳಿಯ ಉತ್ಸವ.

### ೨. ಕಥನಪರ

1) ಸಣ್ಣ ಕಥೆಗಳು. 2) ಪುರಾಣ ಕಥೆಗಳು
3) ಜೀವನ ಚಿತ್ರಗಳು 4) ಶಾಲೆಯ ಆಟಪಾಠಗಳು
5) ನನ್ನ ನೆರೆಹೊರೆಯವರು 6) ನನ್ನ ಕೈಕಸಬು
7) ಹಿಂದೂ ಸಂಸಾರ 8) ನಾಡುಹಬ್ಬಗಳು
9) ಜಾತ್ರೆ 10) ಯುದ್ಧ
11) ಪುಸ್ತಕ ಭಂಡಾರ 12) ವೃತ್ತಾಂತ ಪತ್ರಿಕೆ
13) ಗಾಳಿ ಸಂಚಾರ 14) ಹಳ್ಳಿ ಮತ್ತು ಪಟ್ಟಣ ವಾಸ
15) ನನ್ನ ಪ್ರವಾಸ 16) ಅಂಚೆ ಇಲಾಖೆ
17) ಮದುವೆಯ ಮೆರವಣಿಗೆ

### ೩. ಚಿಂತನಪರ

1) ಸತ್ಯ 2) ಸ್ನೇಹ 3) ದಯೆ 4) ದಾನ
5) ಒಳ್ಳೆಯನಡತೆ 6) ಆರೋಗ್ಯ 7) ಮಿತವ್ಯಯ 8) ಪದ್ಧತಿ
9) ಸ್ವದೇಶಾಭಿಮಾನ 10) ಕಾಲೋಪಯೋಗ

## ೪. ವಿವರಣಪರ.

1) ಗ್ರಾಮ ಪಂಚಾಯಿತಿಗಳು
2) ಸಣ್ಣ ಕಥೆಗಳ ಸ್ವರೂಪ
3) ಸಕ್ಕರೆ, ಕಾಗದ, ಪೆಪ್ಪರಮೆಂಟು ತಯಾರಿಕೆ.
4) ಕನ್ನಡ ಕಾವ್ಯಗಳ ಬಳೆವಣಿಗೆ

## ೫. ಕಲ್ಪನಾಪರ.

1) ನಾನು ಮಹಾರಾಜನಾಗಿದ್ದರೆ.
2) ಪೆನ್ನಿನ ಆತ್ಮ ಚರಿತ್ರೆ
3) ಮೊಟಾರು ಅಥವಾ ಸೈಕಲ್ ಆತ್ಮ ಚರಿತ್ರೆ
4) ಒಂಟಿ ಕುದುರೆ ಮೊದಲಾದ ಪ್ರಾಣಿಗಳ ಪುರಾಣ.
5) ನನಗೆ ಲಾಟರಿಯಲ್ಲಿ ಹಣ ಸಿಕ್ಕರೆ.

## ೫. ಮಿಶ್ರ ಪ್ರಬಂಧಗಳು.

1) ನನ್ನ ಹಿರಿಯ ಬಯಕೆ  2) ನನ್ನ ವಾಹನ
3) ನನ್ನ ಸಂತೋಷ ದಿನಗಳು  4) ನಾನು ಮೆಚ್ಚಿದ ಕವಿ
5) ನಾನು ನೋಡಿದ ಜಾತ್ರೆ  6) ನಗೆ  7) ಹುಚ್ಚು
8) ಹರಟೆ  9) ಐಕಮತ್ಯ  10) ಭಿಕ್ಷುಕ  11) ಕೂಲಿಯವನು
12) ಸಂಗೀತಗಾರ  13) ಕಾಲ್ನಡಗೆಯ ಪ್ರವಾಸ
14) ಅಸ್ಪೃಶ್ಯತಾ ನಿವಾರಣೆ  15) ಸಮಾಜ ಸುಧಾರಣೆ
16) ಸ್ವಾತಂತ್ರ್ಯ ಸಾಧನೆ  17) ಸಮಾಜದಲ್ಲಿ ಸ್ತ್ರೀಯರ ಸ್ಥಾನ
18) ಗ್ರಾಮ ಸುಧಾರಣೆ  19) ನಮ್ಮ ಮುಂದಾಳುಗಳು
20) ನಮ್ಮ ನಾಡು  21) ನಮ್ಮ ಯುವಕರು
22) ಕರ್ನಾಟಕ ಏಕೀಕರಣ  23) ಚರ್ಚಾ ಸಂಘಗಳು

24) ರೈಲ್ವೆ ಪ್ರಯಾಣ 25) ಮದ್ಯಪಾನದ ಅನಾಹುತಗಳು
26) ಬರಗಾಲ 27) ಈಚಿನ ಮಹಾಯುದ್ಧ
28) ಶಾಂತಿ ಸ್ಥಾಪನೆ 29) ಸತ್ಸಂಗ
30) ವ್ಯಾಯಾಮದ ಮಹತ್ವ 31) ಕತ್ತೆಯ ಆತ್ಮ ಕಥೆ.
32) ನಾನು ಕಂಡು ಸವಿದ ಪ್ರಕೃತಿ ದೃಶ್ಯ
33) ಪುರುಷ ಪ್ರಯತ್ನ-ದೈವಾಯತ್ತ.

---

## ಕನ್ನಡ ಶಿಲ್ಪ—ಸರ್ ಎಂ. ವಿಶ್ವೇಶ್ವರಯ್ಯ

ಇಡೀ ಜಗತ್ತನ್ನೇ ತಮ್ಮ ಪ್ರತಿಭೆಯಿಂದ ಬೆರಗುಗೊಳಿಸಿದ ಆಧುನಿಕ ಕನ್ನಡಿಗರು ಯಾರಾದರೂ ಇದ್ದರೆ ಅವರು ಸರ್ ವಿಶ್ವೇಶ್ವರಯ್ಯನವರು ಕನ್ನಡಿಗರಲ್ಲಿ ಇಂದಿಗೂ ಪಾರಂಪರ್ಯದ ತೇಜಸ್ಸು ಇದೆಯೆಂಬುದನ್ನು ಜಗತ್ತು ಅರಿತುದು ಮುಖ್ಯವಾಗಿ ಸರ್ ವಿಶ್ವೇಶ್ವರಯ್ಯನವರಿಂದ.

ಇವರ ಜನ್ಮವಾದುದು ಚಿಕ್ಕಬಳ್ಳಾಪುರದ ಮೋಕ್ಷಗುಂಡಂ ಮನೆತನದಲ್ಲಿ, ೧೮೬೧ ನೆಯ ವರುಷ. ಇವರ ತಂದೆ ಶ್ರೀನಿವಾಸಶಾಸ್ತ್ರಿ ಕಾಶಿಯಲ್ಲಿ ನಿಂತು ೧೦ ವರುಷ ಯೋಗಾಭ್ಯಾಸ ಸಾಧಿಸಿದವರು. ವಿದ್ಯಾವಂತರು, ಬಡವರು.

ಬಾಲ ವಿಶ್ವೇಶ್ವರನು ಚಿಕ್ಕಂದಿನಲ್ಲಿ ತನ್ನೂರಲ್ಲಿ ಶಾಲೆಗೆ ಹೋಗುತ್ತಿರುವಾಗ ಸಹಪಾಠಿಗಳಾದ ಶ್ರೀಮಂತ ಬಾಲಕರು ಸಂದೀಬಿಟ್ಟುಕ್ಕೆ ಅಲ್ಲೀಕೇರಿಗೆ ಹೊರಡಲು ಆತನು ಅವರ ಬುತ್ತಿಗಳನ್ನು ಹೊತ್ತೊಯ್ಯುವನು. ಬಡತನದ ಮೂಲಕ ಬುತ್ತಿ ತರಲಿಕ್ಕಾಗದೆ ಆ ಮೂಟೆ ಹೊತ್ತು ಅವರೊಂದಿಗೆ ಊಟ ಮಾಡುವನು. ಧನಸಂಪತ್ತಿನ ಕೊರತೆಯನ್ನು ವಿದ್ಯಾಸಂಪತ್ತು ಆಕ್ರಮಿಸಿತ್ತು.

ಅಂತೆಯೇ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಬಿ. ಎ. ಆದಾಗ ಅವರ ವಯಸ್ಸು ಇಪ್ಪತ್ತು. ಅವರ ಪ್ರತಿಭೆಯು ಆಗಿನ ಮೈಸೂರಿನ ದಿವಾನರಾದ ರಂಗಾಚಾರ್ಯರ ಮನವನ್ನು ಸೆಳೆಯಿತು. ದಿವಾನರು ಅವರಿಗೆ ವಿದ್ಯಾರ್ಥಿ ವೇತನವನ್ನಿತ್ತು ಪುಣೆಯ ಇಂಜನೀಯರಿಂಗ್ ಕಾಲೇಜಿಗೆ ಓದಲು ಕಳಿಸಿದರು. ಅಲ್ಲಿಯೂ ಮೊದಲನೆಯ ತರಗತಿಯಲ್ಲಿ ಮೊದಲನೆಯ ನಂಬರು ದೊರಕಿಸಿ ತೇರ್ಗಡೆ ಹೊಂದಿದರು. ಆ ಯಶಸ್ಸು ಅವರಿಗೆ ಕೂಡಲೇ ಅಸಿಸ್ಟೆಂಟ್ ಇಂಜನೀಯರ್ ಕೆಲಸವನ್ನು ಕೊಡಿಸಿಬಿಟ್ಟಿತು. ಅದೇನು ಸಣ್ಣ ಮಾತಲ್ಲ. ಮೊದಲನೆಯ ಸ್ವದೇಶಿ ಇಂಜನೀಯರು ಅವರೇ ! ಅವರ ವಯಸ್ಸು ಆ ಹೊತ್ತಿಗೆ ೨೩ ಮಾತ್ರ. ಹೀಗೆ ಸರ್ಕಾರೀ ಸೇವಾವೃತ್ತಿಯನ್ನು ನಿರ್ವಹಿಸಿ ಸಾಗಿಸುತ್ತಿರಲು ೧೮೯೮ ರಲ್ಲಿ ಅಂದರೆ, ಅವರ ೩೭ನೆಯ ವಯಸ್ಸಿಗೆ ಚೀನ-ಜಪಾನಗಳಿಗೆ ಹೋಗಿ ಬಂದಮೇಲೆ ಮುಂಬೈಪ್ರಾಂತದ ನೀರಾವರಿ ಇಂಜನೀಯರೂ, ಆರೋಗ್ಯಾಧಿಕಾರಿಗಳೂ ಆದರು. ಆಗ ಸರ್ಕಾರದವರು ನಿಯಮಿಸಿದ "ನೀರಾವರಿ ವಿಚಾರಣಾ ಸಮಿತಿ"ಯ ಮುಂದೆ ಇವರಿತ್ತ ಸಾಕ್ಷಿಯನ್ನು ಕೇಳಿದವರು "ಇವರನ್ನು ಮೀರಿಸುವ ಇಂಜನೀಯರು ಜಗತ್ತಿನಲ್ಲಿ ಒಬ್ಬರೋ-ಇಬ್ಬರೋ" ಅಂದರು, "ಸುಯೇಜ ಕಾಲುವೆಯ ಇಂಜನೀಯರರಿಂದ ಈಚೆಗೆ ಇವರೇ ಶ್ರೇಷ್ಠ ಇಂಜನೀಯರು" ಎಂದು ದೇಶವೇ ಉಗ್ಗಡಿಸಿತು. ಆದರೆ ಅದರಿಂದ ಅವರ ಅಂತಸ್ತು ಏನೂ ಏರಲಿಲ್ಲ. ಬಿಳಿಯರಿಗೆ ಮಾತ್ರ ಕಾದಿಟ್ಟ ಪ್ರಧಾನ ಇಂಜನೀಯರ್ ಕೆಲಸವು ಇವರಿಗೆ ೨೪ ವರ್ಷ ಸರ್ವೀಸಾಗಿದ್ದರೂ ಸಿಗಲಿಲ್ಲ. ವಿಶ್ವೇಶ್ವರಯ್ಯನವರು ಬೇಸರಪಟ್ಟುಕೊಂಡು ಕೆಲಸವನ್ನೇ ಬಿಟ್ಟುಕೊಡುವುದಕ್ಕೂ, ಮೈಸೂರಿನ ಮಹಾರಾಜರಾಗಿದ್ದ ನಾಲ್ಮಡಿ ಕೃಷ್ಣರಾಜ ಒಡೆಯರ ಕರೆಬರುವುದಕ್ಕೂ ಮೇಳವಿಸಿತು. ಅಂತೂ ಮೈಸೂರಿಗೆ ಬಂದು ಇಲ್ಲಿ ಚೀಫ್ ಇಂಜನೀಯರಾದರು. ೧೯೦೮ ರಲ್ಲಿ ಮತ್ತೆ ಪರದೇಶ-ಪ್ರಯಾಣ ಕೈಕೊಂಡು ಈಜಿಪ್ಟ, ಅಮೇರಿಕಾ ಮುಂತಾದ ದೇಶಗಳಿಗೆ ಹೋಗಿ ಬಂದರು. ಅಲ್ಲಿ ಕಂಡುಬಂದ ಸುಖ-ಸಮೃದ್ಧಿಗಳನ್ನು ನಮ್ಮ ನಾಡಿನಲ್ಲಿ ಕಾಣುವ ಹಂಬಲ ಬಹಳ ಅವರಿಗೆ. ಹಿಂದುಸ್ಥಾನದ ಯಾವ ಇಂಜನೀಯರಿಂಗ್ ಏರ್ಪಾಡಿಗೂ ಇವರ ಸಲಹೆಬೇಕಾಯಿತು.

ಮುಂದೆ ಮೈಸೂರ ದಿವಾನಗಿರಿಯ ಸ್ಥಳವು ಬರಿದಾಯಿತ್ತು. ಭಾರತ ಮಂತ್ರಿಗಳ ಸೂಚನೆ ಬಂತು ಮಹಾರಾಜರಿಗೆ; ವಿಶ್ವೇಶ್ವರಯ್ಯನವರು ದಿವಾನ ಗಿರಿಯ ಪಟ್ಟವನ್ನೇರಿದರು. (೧೯೧೨) ಆ ಮೇಲೆ ಅವರು ಮಾಡಿದ ಕೆಲಸ ಒಂದಲ್ಲ–ಎರಡಲ್ಲ, ನೂರಾರು !

ಗ್ರಾಮೋದ್ಧಾರವು ಅವರ ಜೀವದುಸಿರು. ಗ್ರಾಮಗಳ ಜೀವಾಳವಾದ ಬೇಸಾಯಕ್ಕೆ ಆಧಾರಗಳೆಂದರೆ ದನಗಳು. ಅವುಗಳ ಸುಧಾರಣೆಗೆ ಸಹಾಯ ಪ್ರೋತ್ಸಾಹಗಳು ಬೇಡವೇ ? ಅಂತೆಯೇ ಅಲ್ಲಲ್ಲಿ ದನಗಳ ಪ್ರದರ್ಶನಗಳೂ, ಜಾತ್ರೆಗಳೂ ಮೈವೆತ್ತವು. ಒಕ್ಕಲಿಗರಿಗೆ ಬೀಜ–ಬೆಳೆಗಳನ್ನು ಬೆಳಸುವಿಕೆ ಮೊದಲಾದ ತಿಳುವಳಿಕೆಯು ಅತ್ಯಾವಶ್ಯಕವೆಂದು ಪ್ರಚಾರೋಪನ್ಯಾಸಕರು ನಿಯಮಿತರಾದರು. ಸಮಾಯಾದೀಪಗಳಲ್ಲಿ ಉಪನ್ಯಾಸಗಳಾಗುವಂತೆ ವ್ಯವಸ್ಥೆ ಆಯಿತು. ಕಬ್ಬಿಣದ ನೇಗಿಲುಗಳು ಕಂಗೊಳಿಸಿದವು ; ತೋಟಗಳಿಗೆ ನೀರಿನ ಪಂಪುಗಳು ಪೂರಯಿಸಲ್ಪಟ್ಟವು, ಒಳ್ಳೆಯ ಬೀಜಗಳು ಒದಗಿಸಲ್ಪಟ್ಟವು ; ಕೈಮಗ್ಗಗಳ ಬದಲು ಕಾರ್ಖೋಲಾಳಿಗಳು ಬಂದವು. ಇದೆಲ್ಲ ಸುಧಾರಣೆಗಳು ಆಗಬೇಕಾದರೆ ಜನರಿಗೆ ಅಕ್ಷರಾಭ್ಯಾಸವಾಗಿರುವುದು ಒಳ್ಳೆಯದೆಂದು ಒತ್ತಾಯದ ಶಿಕ್ಷಣವೂ, ಅವರ ಬೆನ್ನಹಿಂದೆ ಪ್ರತಿ ಒಂದು ಗ್ರಾಮಕ್ಕೆ ವಾಚನಾಲಯವೂ ತಲೆಯೆತ್ತಿದವು. ಪತ್ರಿಕಾ ಪ್ರಕಟಣೆಯು ಹೆಚ್ಚಳವನ್ನು ಪಡೆಯಿತು.

ಮೈಸೂರು ನಾಡಿನ ಅರಣ್ಯವೆಂದರೆ ಅಸಂಖ್ಯ ಸೃಷ್ಟವಸ್ತುಗಳ ನಿಧಿಯೇ ಸರಿ. ಕಬ್ಬಿಣದ ಅದಿರು, ಬಿದಿರು, ಶ್ರೀಗಂಧ, ಪಾತ್ರೆಯ ಮಣ್ಣು, ವಿಪುಲ ನೀರು ಇವನ್ನೆಲ್ಲ ಹಾಗೆಯೇ ಬೀಳುಗೊಡುವುದು ಉಚಿತವಲ್ಲವೆಂದು ಇವರು ಬಗೆದರು. ಅದರ ಫಲವಾಗಿಯೇ ಭದ್ರಾವತಿಯಲ್ಲಿ ಕಬ್ಬಿಣ, ಕಾಗದ, ಸಿಮೆಂಟು ಕಾರ್ಖಾನೆಗಳು ಎದೆಯೆತ್ತಿ ನಿಂತಿವೆ. ಬೆಂಕಿಕಡ್ಡಿ, ಸಬಕಾರ, ಮುಣ್ಣನಪತ್ರಿಗಳಿಗಾಗಿ ಮೈಸೂರು ಇಂದು ಅಭಿಮಾನಪಡುತ್ತಿದೆ. ಮೋಟಾರು ವಿಮಾನಗಳ ಕಾರ್ಖಾನೆ ಸ್ಥಾಪಿಸಬೇಕೆಂದೂ, ಘಟಕಗಳನ್ನು ಬಂದರು

ಮಾಡಿಕೊಳ್ಳಬೇಕೆಂದೂ ಇವರ ಹಿರಿಯಾಶೆಯು ಇಂದು ಕೈಗೂಡುವಂತಿದೆ. ಆದರೆ ಮೈಸೂರು ವಿಶ್ವವಿದ್ಯಾನಿಲಯ, ಕರ್ನಾಟಕ ಸಾಹಿತ್ಯಪರಿಷತ್ತು, ಕೃಷ್ಣ ರಾಜಸಾಗರ ಮೊದಲಾದ ಅದ್ಭುತ ವಿಶ್ವಕರ್ಮಗಳು ಇವರಾಳ್ವಿಕೆಯಲ್ಲಿಯೇ ಜನ್ಮವೆತ್ತಿದ್ದು.

ತಂದೆಯ ರಕ್ತವು ಇವರಲ್ಲಿಳಿದು ಮುಂದುವರಿದು ಮಾಡಿದ ಕೆಲಸವೆಂದರೆ ಹರಿಜನ ಸೇವೆ. ಸರಿಯಾದ ಪ್ರತಿಫಲವಿಲ್ಲದೆ ಸರ್ಕಾರದ ಬಿಟ್ಟಿ ಕೆಲಸ ಮಾಡುವ ಹರಿಜನರಿಗೆ ಯೋಗ್ಯವಾದ ಒಂದೆರಡೆಕರೆ ಭೂಮಿಗಳನ್ನು ಕೊಟ್ಟು ಸಾಗುಮಾಡಿಸಿದರು. ಸಾರ್ವಜನಿಕ ಜಲಾಶಯಗಳೂ, ವಿದ್ಯಾಲಯಗಳೂ ಅವರಿಗೆ ಮುಕ್ತದ್ವಾರವಾಗುವಂತೆ ಅನುಕೂಲ ಮಾಡಿಕೊಟ್ಟರು.

ವೇಳೆಯ ಬೆಲೆ, ಉಡುಪು-ತೊಡುಪು, ಚೆಲುವಾದ ಬರೆಹ ಇವು ಸಹ ತಿದ್ದುಪಡಿ ಹೊಂದಿದ್ದು ವಿಶ್ವೇಶ್ವರಯ್ಯನವರ ಪುಣ್ಯದಿಂದಲೇ

"ಆರ್ಥಿಕ ಸ್ವಾತಂತ್ರ್ಯವಿಲ್ಲದೆ ರಾಜಕೀಯ ಸ್ವಾತಂತ್ರ್ಯವಿಲ್ಲ" ಎಂಬುದು, ಇವರು ಹೇಳುವ ದೇಶಕಲ್ಯಾಣದ ಸೂತ್ರ.

ಅವರ ಶ್ರಮದ ಫಲವಾಗಿಯೇ ಮೈಸೂರು ರಾಜ್ಯವು ಮಹಾತ್ಮ ಗಾಂಧೀಜಿಯವರಿಂದ "ರಾಮರಾಜ್ಯ" ಎನಿಸಿಕೊಂಡಿತು. ಅವರನ್ನು ಕೈಗಾರಿಕೆಯ ಕಣ್ವಋಷಿಗಳೆಂದೂ, ಮೈಸೂರ ಜೀವಶಿಲ್ಪಿಯೆಂದೂ, ಜನರು ಕರೆದರು. ಬ್ರಿಟಿಷ್ ಪ್ರಭುತ್ವದವರು "ಸರ್" ಎಂದು ಸಂಬೋಧಿಸಿದರು. ಅಂತೆಯೇ ಮೈಸೂರಿನ ಪ್ರಗತಿಯು ಕಡಿಮೆ ಆಗುವಂತೆ ತಳಹದಿ ಹಾಕಲು ಅವರಿಗೆ ಸಾಧ್ಯವಾಯ್ತು.

ಇಂದಿಗೆ ಅವರ ವಯಸ್ಸು ೮೭ ರ ಮನೆ ದಾಟಲಿದೆ. ಆದರೂ ಅವರ ಸಲಹೆ ಕೇಳಲು ದೇಶ ವಿದೇಶಗಳಿಂದ ಬಂದ ಜನರು ಕಿಕ್ಕಿರಿಯುತ್ತಾರೆ.

ಈ ಕಾಟದಿಂದ ತಪ್ಪಿಸಿಕೊಳ್ಳಬೇಕೆಂದು ೧೦ ಸಾವಿರಕ್ಕೆ ಕಡಿಮೆ ಅಲ್ಲದಷ್ಟು ಫೀ ಇಟ್ಟರೂ ಅವಕಾಶ ಸಿಗದಷ್ಟು ಜನರು ಬರುತ್ತಿದ್ದಾರೆ. ಪ್ರಕೃತಿಯು ಆರೋಗ್ಯವಾಗಿದ್ದು ಅವರಲ್ಲಿ ತರುಣರನ್ನು ಮೀರಿಸುವ ತೇಜವಿದೆ; ಮೈಕಟ್ಟು ತೆಳುವಾದರೂ ಒಳ್ಳೆಯ ಚಟುವಟಿಕೆಯುಳ್ಳವರು. ಇದಕ್ಕೆ ಕಾರಣವಾಗಿ ಅವರ ಜೀವನಸೂತ್ರವೊಂದಿದೆ.

ಎಂಟು ಗಂಟೆ ಕೆಲಸ, ಎಂಟು ಗಂಟೆ ವಿನೋದ, ಎಂಟು ಗಂಟೆ ನಿದ್ದೆ.

ಈ ಸೂತ್ರವು ಅವರನ್ನು ಸುಸೂತ್ರವಾಗಿ ಬಹುಕಾಲ ಬದುಕಿಸಿ, ಅವರಿಂದ ಕನ್ನಡ ನಾಡು ಜಗತ್ತಿನಲ್ಲಿ ಬೆಳಗಲಿ; ಅವರ ಜೀವನವು ನಮ್ಮೆಲ್ಲರ ಆದರ್ಶವಾಗಲಿ.

—ಸಿಂ. ಪಿ. ಲಿಂಗಣ್ಣ

---

## ನಾನು ಈಜು ಕಲಿತದ್ದು.

ಕ್ರಿಸ್‌ಮಸ್ ರಜಾ ಬಂತು. ನಾನು ನಮ್ಮ ಭಾವನವರ ಊರಿಗೆ ಹೋದೆ. "ನೀನು ಯಾವಾಗಲೂ ನಮ್ಮೂರ ಕಡೆ ಬಂದೇ ಇಲ್ಲ. ಈ ರಜದಲ್ಲಿ ಖಂಡಿತ ಬಂದು ಒಂದೆರಡು ದಿವಸ ಇದ್ದು ಹೋಗು" ಎಂದು ನಮ್ಮಕ್ಕ ಕಾಗದ ಬರೆದಿದ್ದರು. ನನಗೂ ಹೋಗೋಣವೆನ್ನಿಸಿತು; ಅಲ್ಲಿಗೆ ಹೋದೆ.

ನಮ್ಮ ಭಾವನ ಊರಿನಲ್ಲಿ ನನಗೇನೂ ಕೆಲಸವಿಲ್ಲ—ಚೆನ್ನಾಗಿ ತಿನ್ನುವುದು, ತಿರುಗುವುದು: ಅಪರೂಪಕ್ಕೆ ಬಂದ ಅಂತ ಅಕ್ಕ ಬೇಕು

ಬೇಕಾದ ತಿಂಡಿಮಾಡಿಕೊಡುತ್ತಿದ್ದಳು. ತಿಂದದ್ದು ಅರಗುವ ಬಗೆ ಹೇಗೆ? ಅದಕ್ಕೋಸ್ಕರ ನಮ್ಮ ಭಾವನ ಜೊತೆಯಲ್ಲಿ ಅಲೆತ, ತೋಟ, ಗದ್ದೆ, ಹೊಲ, ಹೊಳೆ, ಕೆರೆ—ಅವರು ಎಲ್ಲಿಗೆ ಹೋದರೆ ಅಲ್ಲಿಗೆ ಹೋಗುತ್ತಿದ್ದೆ.

ಒಂದು ದಿವಸ ನಾವಿಬ್ಬರೂ ಹೊಳೆಗೆ ಹೋಗಿದ್ದಾಗ ಭಾವನಿಗೆ ಈಜು ಬರುತ್ತೆ ಅಂತ ಗೊತ್ತಾಯಿತು. ನಾವು ಚೌಕ ಸುತ್ತಿಕೊಂಡು ಸ್ನಾನಕ್ಕಾಗಿ ನೀರಿಗೆ ಇಳಿದಿದ್ದೆವು. "ಎಷ್ಟು ಹೊತ್ತು ನೀರಿನಲ್ಲಿ ಮುಳುಗಿರುತ್ತಿ?" ಎಂದು ಕೇಳಿದರು ನನ್ನ ಭಾವ. "ಎಂಟು ಹತ್ತು ಎಣಿಸುಪ ತನಕ" ಎಂದೆ (ಅದೂ ಸುಳ್ಳು ನನ್ನ ಕೈಲಿ ಅಷ್ಟೂ ಆಗುತ್ತಿರಲಿಲ್ಲ.) "ಅಷ್ಟೇಯೆ, ನಾನು ಐನೂರು ಎಣಿಸುವ ವರೆಗೂ ಮುಳುಗಿರುತ್ತೇನೆ" ಎಂದು ನಕ್ಕರು. ನನಗೆ ನಂಬುವುದಕ್ಕೆ ಆಗಲಿಲ್ಲ. ಪರೀಕ್ಷೆಮಾಡಿ ನೋಡೋಣವೆಂದು- "ನಾನು ಏನೋ ಸುಮ್ಮನೆ ಹಾಗೆಂದೆ. ನನ್ನ ಕೈಲಿ ಆಗೊಲ್ಲ ಎಂದು ಹಾಸ್ಯ ಮಾಡುತ್ತೀಯ ಭಾವ. ನೋಡು ಬೇಕಾದರೆ. ಎಲ್ಲಿ, ಸರಿಯಾಗಿ ನನ್ನೆದುರಿಗೆ ನಿಂತುಕೋ. ನಾನು ಮೂರು ಎಣಿಸುತ್ತೇನೆ ಇಬ್ಬರೂ ಒಟ್ಟಿಗೆ ಮುಳುಗಬೇಕು. ಗೊತ್ತಾಯಿತೋ. ಒಂದು....ಎರಡು........ಮೂರು........ಹೂಂ"–ಎಂದೆ, ಇಬ್ಬರೂ ಬುಳಕ್ ಎಂದು ಮುಳುಗಿದೆವು. ನನ್ನ ಕೈಲೂ ಆಗುತ್ತೆ ಅಂತ ಜಂಬ ಕೊಚ್ಚಿಕೊಂಡಿದ್ದೆ ನಮ್ಮ ಭಾವನೆದುರಿಗೆ. ಐನೂರಲ್ಲದಿದ್ದರೆ, ಕಡೆಗೆ ಐವತ್ತು ಎಣಿಸುವವರೆಗಾದರೂ ಮುಳುಗಿರಬೇಡವೆ? ಇಲ್ಲದೆ ಹೋದರೆ ಬಹಳ ಅಪಹಾಸ್ಯಕ್ಕೆ ಗುರಿಯಾಗುತ್ತೇನೆಂದುಕೊಂಡು ಮೂಗು ಕಿವಿ ಬಲವಾಗಿ ಮುಚ್ಚಿಕೊಂಡು, ಜೀವದ ಮೇಲೆ ಆಸೆ ಬಿಟ್ಟು, ದೇವರ ಮೇಲೆ ಭಾರ ಹಾಕಿ,- ಮುಳುಗಿದೆ! ಐದಾಯಿತು, ಹತ್ತಾಯಿತು, ಇಪ್ಪತ್ತಾಯಿತು,-ಕಾಲು ನಡುಕ ಹತ್ತಿತ್ತು, ಉಸಿರು ಆಡಬೇಕೆನ್ನಿಸಿತು–ಇಪ್ಪತ್ತೈದೂ ಆಯಿತು; ಇಪ್ಪತ್ತೇಳು, ಇಪ್ಪತ್ತೆಂ... ಸಾಧ್ಯವಾಗಲಿಲ್ಲ ಇನ್ನು ನೀರಿನ ಮೇಲೆ ಕತ್ತೆತ್ತಿದೆ. ಭಾವ ಇನ್ನೂ ಮುಳುಗಿಯೇ ಇದ್ದರು. ನೋಡೋಣ, ಎಷ್ಟು ಹೊತ್ತು ಮುಳುಗಿರುತ್ತಾರೆ ಎಂದು ಎಣಿಸಲು ಮೊದಲುಮಾಡಿದೆ. ಹೆಚ್ಚೆಂದರೆ ಕಡಮೆ ಐನೂರು

ಆಯಿತು ! ಸಾವಿರವಾಯಿತು ! ನನಗೆ ಆಶ್ಚರ್ಯವಾಯಿತು. "ಭಾವ" ಎಂದು ಬೆದರಿ ಕೂಗಿದೆ. ಭಾವನವರಿಂದ ಉತ್ತರವಿಲ್ಲ. ಸುತ್ತಲೂ ತಿರುಗಿ ನೋಡಿದೆ. ನಮ್ಮ ಭಾವನವರು ನಡುಹೊಳೆಯಲ್ಲಿದ್ದರು !

ಈಜು ಕಲಿಯಬೇಕೆಂದು ನನಗೂ ಬಲು ಆಸೆಯಾಯಿತು. ಹೊಳೆಯಿಂದ ಮನೆಗೆ ಬರುತ್ತಾ ದಾರಿಯಲ್ಲಿ, " ನನಗೂ ಈಜು ಕಲಿಸ ಬೇಕಲ್ಲ, ಭಾವ " ಎಂದೆ.

"ಕಲಿಯೋದೇನು ಕಲಿಯೋದು. ನೀರಿಗೆ ಬಿದ್ದರೆ ಅದರಷ್ಟಿಗದೇ ಬರುತ್ತೆ'' ಎಂದರು.

"ಹಾಗಾದರೆ ನಿನಗೆ ಯಾರೂ ಹೇಳಿಕೊಡಲಿಲ್ಲವೆ?"

"ನನಗೇನೋ ಯಾರೂ ಹೇಳಿಕೊಡಲಿಲ್ಲವಪ್ಪ. ನಮ್ಮ ಮನೆಯಲ್ಲಿ ಒಂದು ಸೋರೆಕಾಯಿ ಬುರುಡೆ ಇತ್ತು. ನಮ್ಮ ತಾತ ಮುತ್ತಾತಂದಿರು ಅದರಲ್ಲಿ ಈಜು ಕಲಿತಿದ್ದಾರಂತೆ. ನಮ್ಮ ತಂದೆ ಮಾತ್ರ ಯಾಕೋ ಈಜನ್ನೇ ಕಲಿಯಲಿಲ್ಲ. ಅದನ್ನು ಬೆನ್ನಿಗೆ ಕಟ್ಟಿಕೊಂಡು ನೀರಿಗೆ ಬಿದ್ದರೆ ಈಜುವುದು ತಾನಾಗಿಯೇ ಬರುತ್ತೆ ಅಂತ ಕೇಳಿದ್ದೆ. ಹಾಗೆಯೇ ಮಾಡಿ ಕಲಿತುಕೊಂಡೆ ಆದರೆ–ಮೊದಲು ನನಗೆ ಗೊತ್ತಿರಲಿಲ್ಲ, ಬುರುಡೆಯಲ್ಲಿ ಒಂದು ತೂತಿತ್ತು."

"ತೂತಿತ್ತೆ! ಆಮೇಲೆ?" ಎಂದು ಕುತೂಹಲದಿಂದ ಕೇಳಿದೆ."

"ಆದರೆ ಆದೇನು ಮಾಡುತ್ತೆ. ನಾನು ಬುರುಡೆ ಬೆನ್ನಿಗೆ ಕಟ್ಟಿ ಕೊಂಡು ನೀರಿಗೆ ಬಿದ್ದು ಕೈಕಾಲಾಡಿಸುತ್ತಲೇ ಇದ್ದೆ. ಯಾಕೋ ಬರುತ್ತಾ ಬರುತ್ತಾ ಬುರುಡೆ ಭಾರವಾಗುತ್ತಾ ಬಂತು, ನಾನು ಕೈಕಾಲಾಡಿಸುವುದು ಮಾತ್ರ ಬಿಡಲೇ ಇಲ್ಲ. ಸೋಪಾನದಿಂದ ಮೂರು ಮಾರು ಹೋಗಿದ್ದವನು ಹಿಂದಿರುಗಿ ಬಂದೇ ಬಿಟ್ಟೆ. ಹಾಗೇಯೆ ಒಂದೆರಡು ಮೂರು ದಿವಸದಲ್ಲಿ ಈಜು ಬಂದೇ ಬಂತು"

"ಈಗಲೂ ಆ ಬುರುಡೆ ಇದೆಯೋ? " ಎಂದು ಕೇಳಿದೆ.

"ನನಗೆ ಈಜು ಕಲಿಸಿದ ಬುರುಡೆಯನ್ನು, ತೂತಿದ್ದರೇನಂತೆ, ಒಡೆದುಹಾಕುತ್ತೇನೆಯೇ? ಹಜಾರದಲ್ಲಿ ಒರಳುಕಲ್ಲು ಹತ್ತಿರ ಗೂಟಕ್ಕೆ ನೇತು ಹಾಕಿದೆ, ನೋಡಲಿಲ್ಲವೆ ನೀನು ?

ಹೌದು, ಹೌದು. ನನಗೂ ಅಲ್ಲಿ ನೋಡಿದ ಜ್ಞಾಪಕ'' ಎಂದು ಸ್ವಲ್ಪ ಹೊತ್ತು ಸಮ್ಮನಿದ್ದೆ. ಕೂಡಲೆ, "ಭಾವ! ನನಗೂ ಈಜು ಕಲಿಸುತ್ತೀಯ ಭಾವ'' ಎಂದು ಕೇಳಿದೆ.

"ಏನು! ಆ ಬುರುಡೆಯಲ್ಲಿ! ನಮ್ಮೂರಿಗೆ ಬಂದುದಕ್ಕೆ ನೀನು ಕ್ಷೇಮವಾಗಿ ಹಿಂದಿರುಗಿ ಹೋದರೆ ಸಾಕು. ನಿಮ್ಮಮ್ಮ...." ಅಷ್ಟರಲ್ಲಿಯೇ ಬಾಯಿಹಾಕಿದೆ,

"ಬುರುಡೆ ಬೇಡ. ಹಾಗೆಯೇ ನೀನೆ ಹೇಳಿಕೊಡು."

"ಹಾಗೆಯೇ ನನಗೆ ಹೇಳಿಕೊಡುವುದಕ್ಕೆ ಬರುವುದಿಲ್ಲನಪ್ಪ. ಈಜು ಹೇಳಿಕೊಡುತ್ತೇನೆ ಅಂತ ನಿನ್ನ ಹೊಳೆಯಪಾಲು ಮಾಡಿಸಲೆ ? ಆಗದು" ಎಂದುಬಿಟ್ಟ.

ಇನ್ನು ಉಪಯೋಗವಿಲ್ಲ ಎಂದು ಸುಮ್ಮನಾದೆ. ಅಪ್ರೊತ್ತು ರಾತ್ರಿ ಮಲಗಿಕೊಂಡಾಗ ಸರಿಯಾಗಿ ನಿದ್ರೆಯೇ ಬರಲಿಲ್ಲ. ಈಜು ಕಲಿಯಬೇಕು ಎನ್ನುವ ಹುಚ್ಚು ನನಗೆ ಬಲವಾಗಿ ಅಂಟಿಬಿಟ್ಟಿತ್ತು. ಆಲೋಚನಾ ತರಂಗಗಳಲ್ಲಿಯೇ ಈಜಾಡುತ್ತಿದ್ದೆ! ಈಜು ಕಲಿತುಕೊಂಡೇ ತೀರಬೇಕು. ಗಂಡಸಾಗಿ ಹುಟ್ಟಿ ಈಜು ಕಲಿಯದಿದ್ದರೆ ಈ ಬದುಕೇಕೆ ? ಕಪ್ಪೆ ಕೂಡ ನೀರಿನಲ್ಲಿ ಈಜುತ್ತಿರುತ್ತದೆ. ಎಮ್ಮೆ ಕೂಡ ಈಜಬಲ್ಲದು. ಕಡೆಗೆ ಇರುವೆ ಕೂಡ. ಅವಕ್ಕೆ ಯಾರೂ ಈಜು ಕಲಿಸುವುದಿಲ್ಲ. ಅಂದಮೇಲೆ ನಾವು ಕಲಿತಾದರೂ ಈಜಬೇಡವೆ ? ಆದ್ದರಿಂದ ಈಜು ಕಲಿಯಲೇ ಬೇಕು. ಮಾರನೆಯ

ದಿವಸವೇ ಕಲಿತು ಬಿಡಬೇಕು. ಹೊಳೆಯಿದೆ. ಬುರುಡೆಯಿದೆ. ನಮ್ಮ ಭಾವ ಅದೇ ಬುರುಡೆ ಕಟ್ಟಿಕೊಂಡು ಈಜು ಕಲಿಯಲಿಲ್ಲವೆ ? ಅವರ ತಾತ ಮುತ್ತಾತಂದಿರು ಕಲಿಯಲಿಲ್ಲವೇ ? ಅವರಿಗೆ ಹೇಳಿ ಕೊಟ್ಟವರಾರು ? ನಾನೇಕೆ ಕಲಿಯಲಾಗುವುದಿಲ್ಲ ? ನೋಡೋಣ ನನಗೆ ನಾನೇ ಈಜು ಕಲಿತು "ನೋಡು ಭಾವ ನೀನು ಹೇಳಿಕೊಡದಿದ್ದರೆ ಕತ್ತೆಯ ಬಾಲ ಹೋಯಿತು" ಎಂದು ಅವನನ್ನು ಹಂಗಿಸಬೇಕು. ಇದಾಗದಿದ್ದರೆ ಮಾರನೆಯ ದಿವಸವೇ ಊರಿಗೆ ಗಾಡಿ ಬಿಡಬೇಕು—ಎಂದು ನಿರ್ಧಾರ ಮಾಡಿಕೊಂಡು ಮಲಗಿಕೊಂಡೆ.

ಬಲು ಬೇಗ ಎಚ್ಚರವಾಯಿತು. ಎಲ್ಲರಿಗಿಂತಲೂ ಮುಂಚೆ ಎದ್ದೆ.

ಬುರುಡೆ ಇದ್ದ ಜಾಗ ಗೊತ್ತಿತ್ತು. ಹಾಸಿಗೆಯಿಂದೆದ್ದು ಗೋಡೆ ತಡವರಿಸಿಕೊಂಡು ಗೋಡೆಯ ಅಂಚಿನಲ್ಲಿಯೇ ಮೆಲ್ಲನೆ ಹೋದೆ. ಸ್ವಲ್ಪ ಹೊತ್ತು ಹೋದೆ—ಹಾ—ಎಂದೆ ಒರಳಿಗೆ ಕಾಲಿಟ್ಟದ್ದೆ ! ನಷ್ಟವೇನಾಗಲಿಲ್ಲ ಕತ್ತಲೆಯಲ್ಲಿ ಬುರುಡೆ ಬೇಗನೆ ಸಿಕ್ಕಿದ ಹಾಗಾಯಿತು, ಹೆಚ್ಚು ಪ್ರಯಾಸವಿಲ್ಲದೆ!

ಹೊಳೆಯನ್ನು ಸೇರುವ ಹೊತ್ತಿಗೆ ಇನ್ನೂ ಕತ್ತಲೆಯಾಗಿಯೇ ಇತ್ತು. ಚೆನ್ನಾಗಿ ಬೆಳಕುಹರಿದಿರಲಿಲ್ಲ. ಹೊಳೆಯ ಬಳಿ ಜನ ಸಂಚಾರವೂ ಇದ್ದಂತೆ ತೋರಲಿಲ್ಲ.

ಬೆಳಕಾದ ಮೇಲೆ ನೀರಿಗೆ ಇಳಿಯೋಣವೆಂದು ಸ್ವಲ್ಪ ಹೊತ್ತು ಕುಳಿತುಕೊಂಡೆ. ಆದರೆ ಅಷ್ಟುಹೊತ್ತಿಗೆ ಭಾವ ಬಂದು ಬಿಟ್ಟರೆ ಕೆಲಸ ಕೆಟ್ಟು ಹೋಗುತ್ತೆ—ಎಂದು ಬಟ್ಟೆ ಬಿಚ್ಚಿಟ್ಟು, ಬುರುಡೆ ಕಟ್ಟಿಕೊಂಡು (ಭಾವ ಬೆನ್ನಿಗೆ ಅಂತ ಹೇಳಿದ ನೆನಪು; ಬೆನ್ನಿಗೋ ಹೊಟ್ಟೆಗೋ ಎಂದು ಅನುಮಾನವಾಯಿತು. ಕಡೆಗೆ ಬೆನ್ನಿಗೇ ಕಟ್ಟಿಕೊಂಡಿದ್ದೆ.) ನಿಧಾನವಾಗಿ ಮುಗುಚಿಕೊಂಡೆ ನೀರಿನಲ್ಲಿ....ತುಂಬಾ ಚಳಿಯಾಯಿತು.

ಭಾವ ಹೇಳಿದಂತೆ ಕೈಕಾಲು ಆಡಿಸುತ್ತಲೇ ಇದ್ದೆ. ಈಜುವವರು ಸಾಮಾನ್ಯವಾಗಿ ಕೈಕಾಲಾಡಿಸುವುದನ್ನು ನೋಡಿದ್ದೆ.

ಅಂತೂ ಈಜುತ್ತಿದ್ದೆ ! ನನಗೆ ಬೇಕಾದದ್ದು ಅದೇ. ನದಿಯೊಡನೆ ನಾನೂ ಲೀಲಾಜಾಲವಾಗಿ ಹೋಗುತ್ತಿದ್ದೆ. ಈಜುವುದು ನನಗೆ ಅಷ್ಟು ಕಷ್ಟವಾಗಿ ಕಾಣಲಿಲ್ಲ. ನನಗೆ ಉಂಟಾದ ಆನಂದದಲ್ಲಿ ಮುಮ್ಮಾಗಿಯ ಚಳಿ ಕೂಡ ತೋರಲಿಲ್ಲ. ಆನಂದಸಾಗರದಲ್ಲಿ ಈಜುತ್ತಿದ್ದೆ.

ಇದ್ದಕ್ಕಿದ್ದ ಹಾಗೆಯೇ "ಘುಳುಂ" ಅಂತ ಮುಳುಗಿದೆ. ಏನೋ ಕೆಳಗೆ ಎಳೆದು ಕೊಂಡಹಾಗಾಯಿತು. ಬುರುಡೆಯಲ್ಲಿ ನೀರು ತುಂಬಿದ್ದರೆ ಮೇಲೆ ಭಾರವಾದ ಅರಿವಿದ್ದಿರಬೇಕಲ್ಲ—ಏನಾದರೂ ಆಗಿರಲಿ. ಆಗ ನನಗಿನ್ನೇನೂ ತೋರಲಿಲ್ಲ. ವಿಪರೀತ ಚಳಿ ; ಪಾತಾಳಕ್ಕೆ ಹೋಗುತ್ತಿದ್ದಂತೆ ಭಾಸವಾಯಿತು. ಉಸಿರಾಡುವುದಕ್ಕೆ ಮಾರ್ಗವಿಲ್ಲ; ಪಾತಾಳಕ್ಕೆ ಹೋದಂತೆಯೇ ತೋರಿತು.

ನಿಜವಾಗಿಯೂ ಪಾತಾಳಕ್ಕೆ ಹೋದೆ !

ಅಲ್ಲಿ ಆದಿಶೇಷನ ದರ್ಬಾರು ! ತೊಯ್ದಿದ್ದ ನಿಕ್ಕರು ಹೊರತು ಬೆತ್ತಲೆ ನಿಂತಿದ್ದೇನೆ ! ಚಳಿಯೊಂದು ಕಡೆ, ಮೈ-ಕೈನಿಂದ ನೀರು ಸುರಿಯುತ್ತಿದೆ....

ಯಾವುದಾದರೂ ಒಂದು ಹಾವು ಕಚ್ಚಿದರೊ ? ಹೊಳೆಯಲ್ಲಿಯೇ ಸಾಯಬೇಕಾಗಿತ್ತು ; ಜಲ ಮರಣದಿಂದ ಪಾರಾಗಿ ಪಾತಾಳಕ್ಕೆ ಬಂದೆ—ಇಲ್ಲಿ ವಿಷಸರ್ಪಗಳ ಕಾಟ ! ಇಷ್ಟರ ಮೇಲೆ ಕಚ್ಚಿದರೆ ಕಚ್ಚಲಿ, ಸಾಯುವವನು ನೀರಿನಲ್ಲಿ ಮುಳುಗಿ ಸತ್ತರೇನು ಹಾವಿನಿಂದ ಕಚ್ಚಿಸಿಕೊಂಡು ಸತ್ತರೇನು? ಎಲ್ಲಾ ಒಂದೇ. ಹಾವು ಕಚ್ಚಿದರೂ ಕಚ್ಚಲಿ. ನಾನು ಚಳಿಯಲ್ಲಿ ನಡುಗಿ ಸಾಯುತ್ತಿದ್ದೆ. ಪುಣ್ಯಾತ್ಮರು ಯಾರಾದರೂ ಬಂದು ಅರಿವೆಯ ಚೂರು ತಂದು ಕೊಟ್ಟರೆ, ಸದ್ಯ ಬದುಕಿಕೊಂಡೆನು ಆ ಬಳಿಕ ಸತ್ತರೂ ಚಿಂತೆಯಿಲ್ಲ ಎನಿಸಿತು.

ಅಷ್ಟು ಹೊತ್ತಿಗೆ—ನನ್ನ ಕಣ್ಣುಗಳನ್ನು ನಂಬಲಾರದೆ ಹೋದೆ;

ನಾಗಕನ್ನಿಕೆಯೋರ್ವಳು ಒಂದು ಟವಲು-ಒಳ್ಳೆ ಟರ್ಕಿ ಟವಲು-- ಹಿಡಿದು ಕೊಂಡು ಬರುತ್ತಿದ್ದಳು. ವಸ್ತ್ರಾಭರಣಗಳನ್ನು ಒಂದು ತಟ್ಟೆಯಲ್ಲಿ ಹಿಡಿದು ಕೊಂಡು ಅವಳ ಸಖಿಯೋರ್ವಳು ಹಿಂದೆಯೇ ಬರುತ್ತಿದ್ದಳು.

ಆಗ ನನಗೆ ಮತ್ತೇನೂ ಬೇಕಿರಲಿಲ್ಲ. ನಾಗಕನ್ನಿಕೆ ನೀಡಿದ ಟವಲನ್ನು ತೆಗೆದುಕೊಂಡೆ....ಚಳಿ ಕೊರೆಯುತ್ತಿತ್ತು....

ಮಧ್ಯಾಹ್ನ ಊಟ ಮಾಡಿ ಚಾಪೆಯ ಮೇಲೆ ಮಲಗಿಕೊಂಡವನು ಹಾಗೆಯೇ ನೆಲಕ್ಕೆ ಉರುಳಿಕೊಂಡು ಹೋಗಿದ್ದೆ. ನೆಲ ಸಿಮೆಂಟು ಗಾರೆಯದು. ಬಹು ನಯ, ಬಹು ತಣ್ಣು. ಹೊದೆದುಕೊಂಡಿದ್ದ ಸಣ್ಣ ಟವಲು ಕೂಡ (ಟರ್ಕಿ ಟವಲು) ಕಾಲು ಕೆಳಗೆ ಜಾರಿ ಬಿದ್ದಿತ್ತು. ಚಳಿ ಕೊರೆಯದೆ ಇನ್ನೇನು !!

—ಎಂ. ವಿ. ಸೀತಾರಾಮಯ್ಯ

---

## ನಾನು ಲೇಖಕನಾದುದು.

ಕವಿಯಾಗಬೇಕೆಂಬ ಆಶೆ ನನಗೆ ಬಹಳ ಕಾಲದಿಂದಲೂ ಇತ್ತು.

ಕಾಳಿದಾಸ, ಆಭಾಸ, ವರ್ಷ, ವಿಭೂತಿ ಮೊದಲಾದ ಮಹಾ ಕವಿಗಳ ಮಹಾ ಕಾವ್ಯಗಳಿಗೆ ಸರಿದೊರೆಯಾಗುವ ಉತ್ತಮ ಕಾವ್ಯವೊಂದನ್ನು ಬರೆಯಬಾರದೇಕೆ ಎಂದು ಯೋಚಿಸತೊಡಗಿದೆ. ತಣ್ಣೀರಿನಲ್ಲಿ ಸ್ನಾನಮಾಡಿ ಒದ್ದೆ ಬಟ್ಟೆಯಲ್ಲಿ ದೇವರೆದುರು ನಿಂತು ಕಾವ್ಯಸ್ಫೂರ್ತಿಯನ್ನು ಬೇಡಿದೆ. ಎರಡು ದಿನಗಳಲ್ಲಿ ಚಳಿ ಜ್ವರ ಬಂತೇ ಹೊರತು ಕಾವ್ಯ ಬರಲಿಲ್ಲ. ಋಷಿಯಲ್ಲದವನು ಕವಿಯಾಗಲಾರ ಎಂದು ತಪಸ್ಸು ಮಾಡಲು ಕುಳಿತೆ ಮೈಗೆ ಗೆದ್ದಲು ಹಿಡಿಯಿತೇ ಹೊರತು ಸಿದ್ಧಿಯಾಗಲಿಲ್ಲ. ಮನೆಯ ಮೇಲೆ ಬಂದು ಕುಳಿತ ಎರಡು ಗುಬ್ಬಚ್ಚಿಗಳ ಕಡೆ ಒಂದು

ಕಲ್ಲೆಸೆದೆ. ಅಕಸ್ಮಾತ್ ಕಲ್ಲು ಒಂದು ಹಕ್ಕಿಗೆ ತಗುಲಿ ಅದು ಪ್ರಾಣ ಬಿಟ್ಟಿತು. ಆಹಾ! ಎಂಥಾ ಸನ್ನಿವೇಶ. ಬದುಕಿದ ಹಕ್ಕಿ- ಅದು ಹೆಣ್ಣೊ ಗಂಡೋ ತಿಳಿಯದು—ಸತ್ತ ಹಕ್ಕಿಯನ್ನು ನೋಡಿ ಪ್ರಲಾಪಿಸುತ್ತಿದೆ. ಅದರ ಕಷ್ಟವನ್ನು ನಾನೂ ಅನುಭವಿಸಲು ಯತ್ನಿಸಿದೆ. ಕಷ್ಟದಿಂದ ಕಾವ್ಯ ಹುಟ್ಟಲಿಲ್ಲ. ನೋವಿನಿಂದ ನಾಟಕವಾಗಲೀ, ಪ್ರಲಾಪದಿಂದ ಪ್ರಬಂಧವಾಗಲೀ, ಶೋಕದಿಂದ ಶ್ಲೋಕವಾಗಲೀ ಉದ್ಭವಿಸಲಿಲ್ಲ.

ಹಿಂದಿನ ಕವಿಗಳು ಹೇಗೆ ತಮ್ಮ ಕಾವ್ಯಗಳನ್ನು ಬರೆದರು ಎಂಬುದು ನನಗೆ ಅರ್ಥವಾಗಲೇ ಇಲ್ಲ. ಅವರು ಬರೆದಿಟ್ಟಿರುವುದನ್ನು ಓದುವುದೇ ಕಷ್ಟ. ಅಷ್ಟಿದೆ ಅವರ ಬರವಣಿಗೆಯ ರೀತಿ. ಅದನ್ನೆಲ್ಲಾ ಅವರು ಹೇಗೆ ಬರೆದರು ? ಹಾಗಾದರೆ ಕವಿಗಳ ವಿಚಾರವಾಗಿ ಪ್ರತೀತವಾಗಿರುವ ಕಥೆಗಳೆಲ್ಲ ಸುಳ್ಳೆ ?

ಕಾವ್ಯದ ಕಿಡಿ ನನ್ನಲ್ಲಿ ಉದ್ಭವವಾಗದಿರಲು ನನಗೆ ಸಿಟ್ಟು ಬಂತು. ಹಿಂದಿನವೆಲ್ಲ ಕೇವಲ ರೂಢಿ, ಸಂಪ್ರದಾಯ ಅಂಧಶ್ರದ್ಧೆ. ಇವು ಇಂದಿನ ಕಾಲಕ್ಕೆ ಹೊಂದುವುದಿಲ್ಲ. ಸಮಾಜ ಬೆಳೆದಂತೆಲ್ಲ ಸಾಹಿತ್ಯವೂ ಬೆಳೆಯ ಬೇಕು. ಹೊಸಕಾಲಕ್ಕೆ ತಕ್ಕಂತೆ ಹೊಸ ಅನುಭವಗಳಿಂದ ಕೂಡಿದ ಹೊಸ ಸಾಹಿತ್ಯವು ಹೊಸಬರಿಂದ ಹೊಸದಾಗಿ ಸೃಷ್ಟಿಯಾಗಬೇಕು. ಅಂದಿನ ಅಷ್ಟಾದಶವರ್ಣನೆಗಳು. ರಾಜರ ಕಥೆಗಳು, ದೇವರ ಪುರಾಣಗಳು ಇವೆಲ್ಲ ಇಂದು ನಮಗೆ ಏಕೆ ? ನಮಗೀಗ ಹೊಸದು ಬೇಕು ಎಂದೆ.

ಅಂದಿನಿಂದ ನನ್ನ ದಾರಿ ಪ್ರಗತಿಪರವಾಯಿತು. ಕಾಡನ್ನು ಬಿಟ್ಟು ಊರಿಗೆ ಬಂದ ಜನಜಂಗುಳಿಯನ್ನು ಅರಿಯಲು ಮೊದಲು ಮಾಡಿದೆ. ಕೋಗಿಲೆ ಕಮಲ, ಕಲ್ಪವೃಕ್ಷಗಳಿಗೆ ಬದಲು ಕಾಗೆ, ಕೂಲಿ, ಕೋಕೋ ವೃಕ್ಷಗಳನ್ನು ವರ್ಣಿಸಲು ಯತ್ನಿಸಿದೆ. ಬೀದಿ ಬೀದಿ ಅಲೆದೆ. ಬಸ್ ಹತ್ತಿ ತಿರುಗಿದೆ. ಮಾರ್ಕೆಟ್ ಹಿಂದೆ ಕಾಳೆಮಾಳೆ ಆಡಿದೆ. ಪುಸ್ತಕ ಭಂಡಾರದಲ್ಲಿ ಬಿಡಾರ ಮಾಡಿದೆ. ಆಧುನಿಕರಂತೆ ಕಾವ್ಯಸ್ಫೂರ್ತಿಯನ್ನು ಪಡೆಯಲು ಸ್ವೇಚ್ಛೆಯಾಗಿ

ಇರತೊಡಗಿದೆ. ಜೀವನದ ಸವಿ ನೋಡಿದೆ. ಸಿಗರೇಟು ಸೇದಿ ಸಿನಿಮಾ ನೋಡಿ ಕಾಸು ಕಳೆದುಕೊಂಡೆ.

ಇಷ್ಟಾದರೂ ಕಾವ್ಯ ಕನ್ನಿಕೆ ಒಲಿಯಲಿಲ್ಲ. ಕಣ್ಣು ಮುಚ್ಚಿದರೂ ಇಲ್ಲ, ಕಣ್ಣು ಬಿಟ್ಟರೂ ಇಲ್ಲ. ಕಾಡಾಯಿತು, ಊರಾಯಿತು, ಜನರಾಯಿತು, ಜನಾರ್ದನನಾಯಿತು. ಎಲ್ಲಿ ಹೋದರೂ ನನ್ನ ಗುರಿ ಸಾಧಿತವಾಗಲಿಲ್ಲ.

ಆದರೂ ಕವಿಯಾಗಬೇಕೆಂಬ ಬಯಕೆ ಮಾತ್ರ ನನ್ನಲ್ಲಿ ಎಳ್ಳಷ್ಟೂ ಕಡಿಮೆಯಾಗಲಿಲ್ಲ. ಕಾಲ ಹಾಗಿತ್ತು. ನನ್ನದು ಮಹಾ ಕವಿಗಳ ಕಾಲ. ಮಹಾ ಕಾವ್ಯ, ಮಹೋಪಮೆ, ಮಹಾ ರಗಳೆ ಇಂಥಾ ಅದ್ಭುತಗಳಿಗೇನೂ ಆಗ ಕಡಿಮೆ ಇರಲಿಲ್ಲ. ನೀಳ್ಗವನ, ಕುಳ್ಗವನ, ಮೂರು ತಲೆಯಾಯಿನ ಬಾಳ್ಗವನ ಎಂದು ಮುಂತಾಗಿ ಸಾಹಿತ್ಯ ವಿವಿಧ ರೂಪದಲ್ಲಿ ಮೂಡುತ್ತಿತ್ತು. ಮಲೆನಾಡಿನ ಕವರ್ಲೆಗಳ ಮೂಲೆ ಮೂಲೆಯಿಂದ, ಬಯಲು ಸೀಮೆಯ ಬೋಳ ಬಾವಿಗಳ ಅಂತರಾಳದಿಂದ ಕಾವ್ಯ ವಾಣಿ ಹೊಮ್ಮುತ್ತಿತ್ತು. ಕರೀ ಸಂತೆಯಲ್ಲಿ ಬಂದ ಬಿಳೀ ಕಾಗದದಿಂದ ಅಚ್ಚಾದ ಪುಸ್ತಕಗಳು ಧಾರಾಳವಾಗಿ ಬೆಳಕಿಗೆ ಬರುತ್ತಿದ್ದವು. ಎಂದಾದರೊಂದು ದಿನ ನಾನೂ ಏನನ್ನಾದರೂ ಬರೆದು ಹೆಸರಾಂತ, ಕೀರ್ತಿವಂತ ಸಾಹಿತಿಯಾಗಬೇಕೆಂದು ನಾನು ಹಂಬಲಿಸ ತೊಡಗಿದೆ, ಕಾಲದ ಪ್ರವಾಹಕ್ಕೆ ಸಿಕ್ಕು.

ಒಂದು ಸಾರಿ ನನಗೆ ಅನುಕೂಲವಾದ ಸನ್ನಿವೇಶವೊಂದು ತಾನೇ ತಾನಾಗಿ ಒದಗಿ ಬಂತು. ದೊಡ್ಡದೊಂದು ಸಭೆ ಎಲ್ಲಿಯೋ ಯಾವ ಕಾರಣ ದಿಂದಲೋ ಸೇರಿದಾಗ ನಾನು ಮುನ್ನುಗ್ಗಿ ಸಭೆಯ ಮುಂದೆ ಉಗ್ರವಾದ ಭಾಷಣ ಮಾಡಿದೆ. ನವಯುಗದ ಸಾಹಿತ್ಯದ ರೂಪುರೇಖೆಗಳನ್ನು ಕುರಿತು ಮಾತನಾಡುತ್ತಾ ಸಂಪ್ರದಾಯ ಶೀಲರಾದ ಮುದಿಯವರನ್ನು ಬೈದು, ಪ್ರಗತಿಯನ್ನು ಎತ್ತಿ ಹಿಡಿದೆ. ರಷ್ಯಾ ನೋಡಿ ಎಂದೆ. ಉದಾಹರಣೆಗೆ ಫ್ರೆಂಚ್ ಸಾಹಿತ್ಯವನ್ನು ನೋಡಿ ಎಂದೆ. ಕಾಂಟಿನೆಂಟಲ್ ಲಿಟರೇಚರ್ ವಿಷಯವಾಗಿ ವಿಮರ್ಶಾ ಪೂರ್ಣವಾಗಿ ಮಾತನಾಡಿದೆ. ವಿಮರ್ಶೆ ಬೆಳೆಯಲಿ ಎಂದೆ. ಕಲೆ,

ಕಾದಂಬರಿ, ಕಾರ್ಯಕ್ರಮ, ಯುವಕರ ಸ್ಫೂರ್ತಿ ಮೊದಲಾದ ಪದಗಳನ್ನು ವಿಪುಲವಾಗಿ ಬಳಸಿದೆ. ನಮ್ಮ ಸಾಹಿತ್ಯ ಇಂದು ಅಡ್ಡದಾರಿಗೆ ತಿರುಗಿ, ತೂಕಡಿಸುತ್ತ, ಹಳಸಿಹೋಗಿದೆಯೆಂದೂ, ಇಂದು ಯುವಕರು ಮುಂದೆ ಬಂದು ಸಾಹಿತ್ಯವನ್ನು ಪ್ರಗತಿಗೆ ತಂದು, ನವಚೈತನ್ಯವನ್ನು ತುಂಬಿ ಅದನ್ನು ಮತ್ತೆ ಬಳೆಸಬೇಕೆಂದು ಉಪದೇಶ ಮಾಡಿದೆ. ಜನ ನನ್ನ ಭಾಷಣವನ್ನು ಕೇಳಿ ತಬ್ಬಿಬ್ಬಾದರು. ಹುಡುಗರ ತಂಡಕ್ಕಂತೂ ಅಪರಮಿತ ಆನಂದವಾಯಿತು. ಮುದುಕರ ಮೂಗು ಮುರಿದು ಮಾತನಾಡಿದುದಕ್ಕಾಗಿ, ಎಲ್ಲರೂ ಕೈ ತಟ್ಟಿ, ಹಾರ ಹಾಕಿ ನನ್ನನ್ನು ಗೌರವಿಸಿದರು. ತಮ್ಮ ಭಾಷಣ ನಮ್ಮಲ್ಲಿ ಆಗಬೇಕು ಎಂದು ಕೆಲವರು ನಮ್ರರಾಗಿ ಬೇಡಿದರು. ಇನ್ನು ಕೆಲವರು "ನಿಮ್ಮ ಒಂದು ಹೂವನ್ನು ಕೊಡಿ ನಮ್ಮ ಮಾಲೆಯಲ್ಲಿ ಪೋಣಿಸುತ್ತೇವೆ" ಎಂದು ಕೇಳಿ ಕೊಂಡರು.

ಅಂತೂ ಅಂದು ರಾತ್ರಿ ಒಂಭತ್ತು ಗಂಟೆಗೆ ನನ್ನ ಕೀರ್ತಿರವಿಯು ಉದಯವಾಯಿತು.

ಭಾಷಣ ಮುಗಿಸಿಕೊಂಡು ಮನೆಗೆ ಬರುವಾಗ ಬಾಗಿಲಲ್ಲಿ, ಬಡ ಶರೀರದ, ಯುವಕರೆನಿಸಿಕೊಂಡ ಕೆಲವರು ಶಿಷ್ಯರು ನಿಂತು ನನ್ನನ್ನು ನಾಯಕನನ್ನಾಗಿ ಸ್ವೀಕರಿಸಿ ಪ್ರಗತಿಯ ಸ್ಫೂರ್ತಿಯನ್ನು ಬೇಡಿದರು. ಅವರ ಹಾಸ್ಯ ಅವರ ಕವನ ಕಲೆ, ಅವರ ನಾಟ್ಯ ನೈಪುಣ್ಯ ಇವೆಲ್ಲವನ್ನೂ ಕಂಡು ನನಗೆ ಪರಮಾಶ್ಚರ್ಯವಾಯಿತು. ಇಂಥಾ ಯುವಕರನ್ನು ಮುಂದೆ ತರುವುದಕ್ಕಾಗಿ ಅಂದಿನಿಂದಲೂ ಪ್ರಯತ್ನ ಮಾಡಲು ಪ್ರಾರಂಭಿಸಿದೆ.

ಹತ್ತಿರ ಕರ್ಣಾಟಕ, ಗುಡುಗು, ಛತ್ರದುರ್ಗ, ಖಾರಕಾಳು, ಹಡಪ ಮೊದಲಾದ ಪ್ರಾಂತಗಳಲ್ಲಿ ನಾನೂ ಮತ್ತು ನನ್ನ ಗೆಳೆಯರು ಒಂದಾಗಿ ಪ್ರಗತಿಯ ಪ್ರಚಾರ ಮಾಡಿ ಅಲ್ಲಲ್ಲಿ ಸಂಘಗಳನ್ನು ಸ್ಥಾಪಿಸಿದೆವು. ಮತ್ತು ಕೇವಲ ಆರೆಂಟು ತಿಂಗಳುಗಳಲ್ಲಿಯೇ ನಮ್ಮ ಹತ್ತಾರು ಪುಸ್ತಕಗಳು ಅಚ್ಚಾದವು. ನಾವು ಹೇಳುವ ಪ್ರಗತಿಗೂ ನಮ್ಮ ಪುಸ್ತಕಗಳಿಗೂ ಯಾವ ಸಾಮ್ಯವೂ ಇಲ್ಲವೆಂತ ವಿಮರ್ಶಕರನೇಕರು, ಬೈದರು. ಮಡಿಯವರ ಮೈನವಿರೆದ್ದಿತು. ಪಕ್ಷ ಪ್ರತಿಪಕ್ಷದ ಬೈಗುಳದ ಮಳೆಯಿಂದ ಪತ್ರಿಕೆಗಳೆಲ್ಲ ಒದ್ದೆಯಾದವು.

ಒಂದು ಕಡೆ ಯುವಕರ ಒತ್ತಾಯ, ಮತ್ತೊಂದುಕಡೆ ಪ್ರಕಾಶಕರ ಕಾಟ. ಮಗುದೊಂದುಕಡೆ ಹೇಳಿದಂತೆ ಬರೆದು ತೋರಿಸುವ ಹಟ. ಈ ಮೂರು ಕಾರಣಗಳಿಂದ ಪ್ರೇರಿತನಾಗಿ ನಾನು ಲೇಖನಿ ಹಿಡಿದೆ. ನನ್ನದೂ ಕೂಡ ಹಲಗೆ ಬಳಪವ ಹಿಡಿಯದ ಅಗ್ಗಳಿಕೆಯೆ. ನಾನೂ ಇಟ್ಟ ಪದವನ್ನು ಅಳಿಸುತ್ತಿರಲಿಲ್ಲ. ಇಂಗ್ಲೀಷಿನಿಂದ ಹೊಸ ಭಾವಗಳನ್ನು ತಂದು ಬರೆಯ ತೊಡಗಿದೆ. ತಿಳಿಯುವವರು ನನ್ನನ್ನು ಕೊಂಡಾಡಿದರು. ತಿಳಿದವರು ಕವಿ ಮಾಲೆಂದು ಹುಸಿನಕ್ಕು ಸುಮ್ಮನಾದರು. ಅದ್ಭುತ ಕಾದಂಬರಿಗಳನ್ನು ಬರೆದೆ ಬಿಳಿಯ ಕಾಗದ. ದಪ್ಪ ರಟ್ಟು ಮೂರು ಬಣ್ಣದ ಮುಖ ಪತ್ರ, ಸಚಿತ್ರ. ಸುಮಾರು ಒಂದು ಸಾವಿರದ ಎರಡು ಪುಟಗಳು. ಸ್ವತಂತ್ರ ಸಮಾಜಿಕ ಎಂದು ಪ್ರಕಟನೆ ಮಾಡಿದ್ದರಿಂದ ನನ್ನ ಕಾದಂಬರಿಗಳು ಬೋಂಡ ಸಾಂಬಾರಿನಂತೆ ಖರ್ಚಾದವು. ವಿಮರ್ಶಕರಲ್ಲಿ ಕೆಲವರು ನನ್ನ ಪುಸ್ತಕಗಳನ್ನು ಸೀಳಿ ಸೀಳಿ ಪಲ್ಯಮಾಡಿದರೂ ಕೂಡ, ಪ್ರಕಾಶಕರನೇಕರು ನನ್ನ ಹತ್ತಿರಬಂದು "ಈಗೇನ್ರಿ ಜನ ಜಾಣರಿದ್ದಾರೆ....ಕದ್ದು ಓದುತ್ತಿದ್ದವರು ಕೊಂಡು ಓದುತ್ತಿದ್ದಾರೆ. ರೈಲಿನಲ್ಲಿ ಮಾತ್ರ ಓದುತ್ತಾರೆ. ಪುಸ್ತಕ ನೋಡುವುದಕ್ಕೆ ಚೆನ್ನಾಗಿದ್ದರಾಯಿತು. ನೀವು ಬೇಕಾದಷ್ಟು ಬರೆಯಿರಿ. ನಾವು ಅಚ್ಚು ಮಾಡುತ್ತೇವೆ" ಎಂದವರು ನನ್ನನ್ನು ಉತ್ಸಾಹಿಸಿದರು.

ಹೀಗೆ ನಾನು ಇಂದು ಹತ್ತು ಕಾದಂಬರಿಗಳು, ಕಥೆಗಳ ಸಂಕಲನ ಮೂರು, ಒಂಭತ್ತು ನಾಟಕಗಳು ಇತ್ಯಾದಿಯಾಗಿ ನಲವತ್ತೆರಡು ಗ್ರಂಥಗಳ ಪಿತೃವಾಗಿದ್ದೇನೆ. ಕೆಟ್ಟ ಮಗನನ್ನು ಪಡೆದಂತೆ ಕೆಡುಕಾಗುತ್ತದೆ ಎಂದು ಭಾಮಹ ಹೇಳಿದ್ದಾನಂತೆ. ಎಂಥಾ ಅಪಪ್ರಚಾರದ ಮಾತದು. ಕಾವ್ಯದಲ್ಲಿ ಒಳ್ಳೆಯದು ಎಂದರೇನು-ಕೆಟ್ಟದು ಎಂದರೇನು? ಶೀಲ ಎಂದರೇನು—ಅಶ್ಲೀಲ ಎಂದರೇನು? ಅಲ್ಲದೆ ಕೆಟ್ಟದ್ದು ಎಂದು ಹೇಳಲು ಇವರು ಯಾರು? ಇವರಿಗೆ ಕೆಟ್ಟಿರುವುದು ಮತ್ತೊಬ್ಬರಿಗೆ ಒಳ್ಳೆಯದಾಗಿರಬಹುದು. ಇವರ ಹೆದರಿಕೆಗೆ ಮರುಳಾಗಿ ಬರೆಯುವುದನ್ನು ನಾನೇಕೆ ನಿಲ್ಲಿಸಲಿ?

ಎಲೆಮರೆಯ ಕಾಯಂತೆ ಮೌನದಿಂದ ನಾಡು, ನುಡಿ, ಗುಡಿ ಎಂದು ಇದ್ದಿದ್ದರೆ, ಗಂಭೀರವಾಗಿ ಎರಡು ಗ್ರಂಥ ಬರೆದಿದ್ದರೆ ಬಹುಶಃ ನಾನು

ಸಾಯುವವರೆಗೂ ಜನ ನನ್ನನ್ನು ಕಾಣುತ್ತಿರಲಿಲ್ಲ. ಆದೇ ಈಗ ಬಿರುಸಾದ ಮುನ್ನುಡಿ, ಬಾಣದಂಥಾ ಭಾಷಣ, ಕೊಳ್ಳಿಯಂಥಾ ಕ್ರಾಂತಿ ಇವುಗಳಿಂದ ಜನ ನನ್ನನ್ನು ಗುರುತಿಸಿದ್ದಾರೆ. ಬೈಯುವವರು ಸುಸ್ತಾಗಿ ತಣ್ಣಗಾಗಿದ್ದಾರೆ. ಹೊಗುಳುವವರು ಹೋಗಳುತ್ತಲೇ ಇದ್ದಾರೆ. ಅವರು ನೆಚ್ಚುತ್ತಿರುವವರೆಗೂ ನನಗೆ ಭಯವು ಎಳ್ಳಷ್ಟು ಇಲ್ಲ!

—ಎಸ್. ಪ್ರಹ್ಲಾದರಾವ್

---

## ಮೈಸೂರು ಎಸ್. ಎಸ್. ಎಲ್. ಸಿ. ಪರೀಕ್ಷೆಯ ಪ್ರಶ್ನಪತ್ರಿಕೆ.

(ಪ್ರಬಂಧ ಭಾಗ ಮಾತ್ರ)

### 1945

1) ನಾ ಕಂಡು ಸವಿದ ಪ್ರಕೃತಿ ದೃಶ್ಯ
2) ನನ್ನ ಮೆಚ್ಚಿನ ಮಹಾಪುರುಷ.
3) ನನ್ನ ಜೀವನೋದ್ದೇಶ.

### 1946

1) ರೈಲು ಪ್ರಯಾಣ 2) ನನ್ನ ಮನೆ
3) ಯುದ್ಧದಿಂದಾಗುವ ಹಾನಿ.

### 1947

1) ದೇಶಪ್ರೇಮ, 2) ಹಳ್ಳಿಯ ಜೀವನ 3) ಚಲನ ಚಿತ್ರ.

### 1948

1) ಕರ್ತವ್ಯನಿಷ್ಠೆ 2) ನಗರ ಜೀವನ
3) ಹಳ್ಳಿಯ ಜಾತ್ರೆ. 4) ನಾಟಕ ಪ್ರದರ್ಶನ.

---

ಜನರಲ್ ಏಜೆನ್ಸಿ ಮುದ್ರಣಾಲಯ ತುಮಕೂರು.

## ತಿದ್ದುಪಡಿ

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೧ | ೭ | ಆಗಿರುವುದು | ಆಗಿರುವುವು. |
| ೪ | ೧೫ | ಸ್ಪಷ್ಟಾರ್ಥತೆ | ಸ್ಪಷ್ಟಾರ್ಥಕ್ಕೆ |
| ೪ | ೧೮ | ಭಾಷೆಯು | ಭಾಷೆ–ಇವು |
| ೫ | ೪ | ತಡೆಗಳಲ್ಲಿ | ಕಡೆಗಳಲ್ಲಿ |
| ೫ | ೧೪ | ಐಕ್ಯತೆ | ಐಕ್ಯ |
| ೭ | ೧೧ | ವಿ. ಸೂ. | ವಿಷಯ ಸಂಗ್ರಹ:— |
| ೭ | ೨೦ | ಮಾಡಲು | ಮೊದಲು |
| ೧೦ | ೭ | ಇಲ್ಲದಿರುವುದೂ | ಇಲ್ಲದಿರುವುದು |
| ೧೧ | ೧, ೩ | ಕತೃ | ಕರ್ತೃ |
| ೧೧ | ೪ | ಪುನರೋಕ್ತಿ | ಪುನರುಕ್ತಿ |
| ೧೨ | ೧ | ನಿರ್ಬಂಧ | ನಿಬಂಧ |
| ೧೨ | ೧೦ | ಅದ | ಆದ |
| ೧೩ | ೪ | ಐಕ್ಯತೆಯು | ಐಕ್ಯವು |
| ೧೩ | ೧೫ | ಅರ್ಥಕ್ರಮವೂ | ಅರ್ಥಕ್ರಮವು |
| ೧೫ | ೨೦ | ವರ್ಣನಾಪರ | ವರ್ಣನಾಪರ ಪ್ರಬಂಧ |
| ೧೮ | ೩ | ಲೇಖಣಿ | ಲೇಖನಿ |
| ೬ | ೧೦ | ಹೇಳುವುದೂ | ಹೇಳುವುದು |
| ೧೫ | ೭ | ವೈಷಿಷ್ಟ್ಯ | ವೈಶಿಷ್ಟ್ಯ |
| ೨೦ | ೭ | ಇವೆ | ಇದೆ |
| ೨೯ | ೨೩ | ತೋರಿಸುವಂತೆಯ್ಯೂ | ತೋರಿಸುವಂತೆಯೂ |
| ೨೯ | ೧೮ | ಒಂಟಿಯಾಳ | ಒಂಟಿಯಾಗಿ |
| ೩೩ | ೯ | (ಮಹಾರಾಜೇಶ್ರೀ) | (ಮಹಾರಾಜ ಶ್ರೀ) |
| ೩೩ | ೧೦ | ಬ್ರ॥ ಶ್ರೀ | ಬ್ರಹ್ಮಶ್ರೀ |
| ೩೩ | ೯ | (ಬಿಟ್ಟಿರುವುದು) | ಶ್ರೀಮಾನ್, ಶ್ರೀಯುತರಾದ |

| | | | |
|---|---|---|---|
| ೩೩ | ೧೨ | ಸಾಷ್ಟ್ಯಾಂಗ | ಸಾಷ್ಟಾಂಗ |
| ೩೩ | ೧೩ | ತಿ\|\| | ತೀ\|\| |
| ೩೩ | ೧೮ | ಅಶೀರ್ವಾದ | ಆಶೀರ್ವಾದ |
| ೩೬ | ೮ | ಸಂಭೋದಿಸಬೇಕೇ | ಸಂಬೋಧಿಸಬೇಕೇ |
| ೩೬ | ೧೧ | ಅಂತ್ಯಂತ ವೀಧೇಯ | ಅತ್ಯಂತ ವಿಧೇಯ |
| ೩೬ | ೧೨ | ಅಯಾ | ಆಯಾ |
| ೩೭ | ೬ | ಉ\|\| ಕ\|\| ಸಾಂ\|\| | ಉ\|\| ಕು\|\| ಸಾಂ\|\| |
| ೪೨ | ೨ | ವೊಟಾರ್ | ಮೋಟಾರ್ |
| ೪೨ | ೧೨ | ಧಕ್ಷತೆ | ದಕ್ಷತೆ |
| ೪೩ | ೪ | ನಿರ್ಧಿಷ್ಟ | ನಿರ್ದಿಷ್ಟ |
| ೪೭ | ೧೩ | ಶೃತಿವಾಕ್ಯ | ಶ್ರುತಿವಾಕ್ಯ |
| ೪೯ | ೧೭ | ಪ್ರಿಯ | ಪ್ರಿಯಂ |
| ೪೯ | ೧೮ | ಬ್ರೂಯತ್ | ಬ್ರೂಯಾತ್ |
| ೪೯ | ೨೩ | ಸತ್ಯಮೇವೊದ್ಧರಾಮ್ಯಹಂ | ಸತ್ಯಮೇವೋದ್ಧರಾಮ್ಯಹಂ |
| ೫೭ | ೧೭ | ದಿಪಾವಳೀ | ದೀಪಾವಳೀ |
| ೫೭ | ೧೪ | ಹಾನೀಯೇ | ಹಾನಿಯೇ |
| ೬೧ | ೭ | ಶಿಲ್ಪ | ಶಿಲ್ಪಿ |
| ೬೫ | ೧೦ | ಸಿಂ. ಪಿ. ಲಿಂಗಣ್ಣ | ಸಿಂಪಿ. ಲಿಂಗಣ್ಣ |
| ೬೭ | ೧೨ | ಇದ್ದಾರಂತೆ | ಇದ್ದರಂತೆ |
| ೫೩ | ೧ | ರಾಬ್ರೂಸ್ | ರಾಬರ್ಟ್ ಬ್ರೂಸ್ |
| ೫೦ | ೧೨ | ನಡಿಯೋಣ | ನಡೆಯೋಣ |
| ೭೬ | ೪ | ಹೋಗಳುತ್ತಲೇ | ಹೊಗಳುತ್ತಲೇ |



ಸ್ವಾಮ್ಯಸ್ಥರು :
ವೈ. ಎನ್. ಜಗನ್ನಾಥಶೆಟ್ಟಿ ಅಂಡ್ ಬ್ರದರ್,
ನಗರ್ತರಪೇಟೆ, ಬೆಂಗಳೂರು



ವಿಕ್ರಯಾಧಿಕಾರಿಗಳು :
ಮೋಹನ್ ಸ್ಟೋರ್ಸ್,
ಪ್ರೊಪ್ರೈಟರ್ಸ್ :
ಡಿ. ವಿ. ಗಂಗಾಧರಶೆಟ್ಟಿ ಅಂಡ್ ಬ್ರದರ್,
ಮಧುಗಿರಿ, ತುಮಕೂರು ಜಿಲ್ಲೆ



ಜನರಲ್ ಏಜೆನ್ಸಿ ಮುದ್ರಣಾಲಯ, ತುಮಕೂರು.